# ಭಾಸ ಕಥಾಮಂಜರಿ

B. Sridhar Rao

(ಪಿ. ಯು. ಸಿ. ಎರಡನೆಯ ವರ್ಷದ ಪಠ್ಯ ಪುಸ್ತಕ) (P.C.M.B)

ಎಸ್. ಕೆ. ರಾಮಣ್ಣ, ಎಂ. ಎ.



...ಲಿಷ್ ಸ್ಟೋರ್ಸ್ (Regd) : ಬೆಂಗಳೂರು 2

ರೂ. 2-9[illegible]

# ಭಾಸ ಕಥಾಮಂಜರಿ

B. Sridhar Rao.
II nd year P.C.M.B.
Bangalore.

ಎಸ್. ಕೆ. ರಾಮಣ್ಣ, ಎಂ. ಎ.,




ಪ್ರಕಾಶಕರು :

ಸುಭಾಷ್ ಸ್ಟೋರ್ಸ್ (Regd)

ಅವೆನ್ಯೂ ರೋಡ್

ಬೆಂಗಳೂರು–೨

# ಮೊದಲ ಮಾತು

ವಿದ್ಯಾರ್ಥಿಯಾಗಿದ್ದಾಗಿನಿಂದಲೂ ನಾನು ಭಾಸನ ನಾಟಕಗಳನ್ನು ಓದಿ ಆನಂದಿಸುತ್ತಿದ್ದೇನೆ, ಅವನ್ನು ಮೆಚ್ಚಿಕೊಂಡಿದ್ದೇನೆ. ಭಾಸನು ರಚಿಸಿರುವ ನಾಟಕಗಳಲ್ಲಿ ಹತ್ತನ್ನು ಮಾತ್ರ ಇಲ್ಲಿ ಬರೆದಿದ್ದೇನೆ. ಉಳಿದ ಅವಿಮಾರಕ, ಅಭಿಷೇಕ ನಾಟಕ, ಬಾಲಚರಿತ ಮತ್ತು ಈಚೆಗೆ ಸಿಕ್ಕಿರುವ ಭಾಸನದೇ ಆದ ಯಜ್ಞಫಲ—ಈ ನಾಟಕಗಳನ್ನು 'ಭಾಸಕಥಾಮಂಜರಿ' ಎರಡನೆಯ ಭಾಗದಲ್ಲಿ ಬರೆಯಬೇಕೆಂದಿದ್ದೇನೆ. ವಿರಾಮವಾಗಿ ಕುಳಿತು ಭಾಸನ ನಾಟಕವನ್ನು ಓದಿಕೊಳ್ಳಲಾರದವರಿಗೂ ಮತ್ತು ವಿದ್ಯಾರ್ಥಿಗಳಿಗೂ ಸುಲಭ ಗ್ರಾಹ್ಯವೂ ಅನುಕೂಲವೂ ಆಗಲೆಂಬ ನನ್ನ ಉದ್ದೇಶ ಈ ಪುಸ್ತಕದ ಪ್ರಕಟಣೆಗೆ ಕಾರಣವಾಗಿದೆ.

ಭಾಸನ ನಾಟಕಗಳನ್ನು ಆಮೂಲಾಗ್ರವಾಗಿ ಓದಿ ಕವಿ ಹೇಳಿರುವ ಯಾವ ಮುಖ್ಯ ವಿಷಯ ಮತ್ತು ಭಾವಗಳನ್ನೂ ಬಿಡದೆ ಮತ್ತು ನನ್ನ ಯಾವ ಸ್ವಂತ ಅಭಿಪ್ರಾಯವನ್ನೂ ಸೇರಿಸದೆ ಇದನ್ನು ಬರೆದಿದ್ದೇನೆ. ಆದರೆ ನಾನು ಮಾಡಿಕೊಂಡಿರುವ ಬದಲಾವಣೆಯಲ್ಲಿ ಮುಖ್ಯವಾದ ಎರಡನ್ನು ಇಲ್ಲಿ ತಿಳಿಸುವುದು ಅಗತ್ಯವಾಗಿದೆ. ಪಂಚರಾತ್ರದಲ್ಲಿ ಕೌರವನ ಯಜ್ಞ ವೈಭವವನ್ನು ಬ್ರಾಹ್ಮಣರಿಂದಲೂ ಮತ್ತು ಊರುಭಂಗದಲ್ಲಿ ಭೀಮ ದುರ್ಯೋಧನರ ಗದಾಯುದ್ಧವನ್ನು ಭಟರಿಂದಲೂ ಕವಿ ಹೊಗಳಿಸಿದ್ದಾನೆ. ಆದರೆ ನಾನು ಇಲ್ಲಿ ಮೂಲದಲ್ಲಿರುವಂತೆ ಇಟ್ಟುಕೊಂಡಿಲ್ಲ. ಬ್ರಾಹ್ಮಣರ ಮತ್ತು ಭಟರ ವರ್ಣನೆಯನ್ನು ನನ್ನ ಮಾತಿನಿಂದಲೇ ಸಂಗ್ರಹವಾಗಿ ಹೇಳಿಬಿಟ್ಟಿದ್ದೇನೆ. ಹೀಗೆ ಮಾಡುವುದು ಕಥಾದೃಷ್ಟಿಯಿಂದ ಆವಶ್ಯಕವೆಂದು ನನಗೆ ತೋರಿತು. ಈ ಎರಡು ಸಂದರ್ಭಗಳನ್ನು ಬಿಟ್ಟು ಉಳಿದ ಎಡೆಗಳಲ್ಲೆಲ್ಲ ಮೂಲವನ್ನೇ ಅನುಸರಿಸಿದ್ದೇನೆ.

'ಭಾಸಕಥಾಮಂಜರಿ' ಬೆಳಕಿಗೆ ಬರಲು ಕಾರಣರಾದ ಮತ್ತು ತಮ್ಮ ಅಮೂಲ್ಯವಾದ ಸಲಹೆಯನ್ನು ನೀಡಿದ ಪೂಜ್ಯರೂ ನನ್ನ ಹಿತೈಷಿಗಳೂ ಆದ ಶ್ರೀಮಾನ್ ದೇ. ಜವರೇಗೌಡ, ಎಂ. ಎ., ಶ್ರೀಮಾನ್ ಎಚ್. ಎಂ. ಶಂಕರ ನಾರಾಯಣರಾವ್, ಎಂ. ಎ., ಮತ್ತು ಶ್ರೀಮಾನ್ ಎಸ್. ವಿ. ಪರಮೇಶ್ವರ ಭಟ್ಟ, ಎಂ. ಎ., ಅವರಿಗೆ ನಾನು ಈ ಮೂಲಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

## ಪಠ್ಯ ಪುಸ್ತಕ ಅವೃತ್ತಿ

ಈ ಕೃತಿಯನ್ನು ೧೯೭೭–೭೭ನೆಯ ವರ್ಷದ ಎರಡನೆಯ ಪಿ.ಯು.ಸಿ. ತರಗತಿಗೆ (ಮೊದಲನೆಯ ವಿಭಾಗ) ಪಠ್ಯಪುಸ್ತಕವನ್ನಾಗಿ ನಿಯಮಿಸಿರುವ ಪಿ.ಯು.ಸಿ. ಪಠ್ಯ ಪುಸ್ತಕ ಸಮಿತಿ ಮತ್ತು ಮಂಡಲಿಗೆ ನಮ್ಮ ಕೃತಜ್ಞತೆಗಳು.

**ಎಸ್. ಕೆ. ರಾಮಣ್ಣ**

ಮೈಸೂರು 15—6—76

## ಪರಿವಿಡಿ


೧ ಪ್ರತಿಮಾ ನಾಟಕ ೧
೨ ಪಂಚರಾತ್ರ ೨೫
೩ ಮಧ್ಯಮ ವ್ಯಾಯೋಗ ೪೪
೪ ದೂತ ವಾಕ್ಯ ೫೪
೫ ದೂತ ಘಟೋತ್ಕಚ ೬೨
೬ ಕರ್ಣಭಾರ ೭೨
೭ ಊರು ಭಂಗ ೮೧
೮ ಪ್ರತಿಜ್ಞಾ ಯೌಗಂಧರಾಯಣ ೯೧
೯ ಸ್ವಪ್ನವಾಸವದತ್ತ ನಾಟಕ ೧೦೬
೧೦ ಚಾರುದತ್ತ ೧೨೯






# ಪ್ರತಿಮಾ ನಾಟಕ

ಅಯೋಧ್ಯಾನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಭಾರತವರ್ಷವನ್ನು ಇಕ್ಷ್ವಾಕುಕುಲದ ಅರಸನಾದ ದಶರಥನು ಆಳುತ್ತಿದ್ದನು. ಅವನಿಗೆ ಕೌಸಲ್ಯೆ, ಸುಮಿತ್ರೆ, ಕೈಕೆಯರೆಂಬ ಅರಸಿಯರೂ, ರಾಮ, ಲಕ್ಷ್ಮಣ, ಭರತ ಮತ್ತು ಶತ್ರುಘ್ನರೆಂಬ ಮಕ್ಕಳೂ ಇದ್ದರು. ಕೌಸಲ್ಯಾತನಯನಾದ ರಾಮನು ಜ್ಯೇಷ್ಠ ಪುತ್ರನೂ, ರಾಜನಿಗೆ ಅತ್ಯಂತ ಪ್ರೀತಿಪಾತ್ರನೂ ಆಗಿದ್ದನು. ಮಕ್ಕಳೆಲ್ಲರಿಗೂ ವಿವಾಹವಾಗಿತ್ತು. ಜೀವನದಲ್ಲಿ ದಶರಥ ಮಹಾರಾಜನಿಗೆ ಯಾವ ಅರೆಕೊರೆಯೂ ಇರಲಿಲ್ಲ. ಧರ್ಮಿಷ್ಠನಾದ ಅವನ ಆಳ್ವಿಕೆಯಲ್ಲಿ ದೇಶ ಸುಭಿಕ್ಷವಾಗಿತ್ತು, ಸಮೃದ್ಧವಾಗಿತ್ತು. ಪ್ರಜೆಗಳು ಸುಖವಾಗಿದ್ದರು. ತಾಪಸರ ತಪಸ್ಸು ನಿರ್ವಿಘ್ನವಾಗಿ ಜರುಗುತ್ತಿತ್ತು.

ಮನುಷ್ಯನಿಗೆ ಒಂದೇ ಅವಸ್ಥೆ ಇರುತ್ತದೆಯೆ ? ಕಾಲ ಕಳೆದಂತೆ ದಶರಥನಿಗೆ ಯೌವನ ಕುಗ್ಗಿ ಮುಪ್ಪು ಅಡಸಿತು. ಮನುಷ್ಯನಾಗಿ ಹುಟ್ಟಿದವನು ಬಯಸಬಹುದಾದ ಸುಖಸಂಪತ್ತುಗಳನ್ನೆಲ್ಲ ಅವನು ಅನುಭವಿಸಿಯಾಗಿತ್ತು. ಆದ್ದರಿಂದ ಲೌಕಿಕ ಭೋಗಗಳಲ್ಲಿ ವಿರಕ್ತಿ ಹುಟ್ಟಿ ಮೋಕ್ಷಲಕ್ಷ್ಮಿಯ ಮೇಲೆ ಅವನ ಮನಸ್ಸು ಒಲಿಯಿತು. ವಯೋವೃದ್ಧನೂ ಜ್ಞಾನವೃದ್ಧನೂ ಆದ ಅವನು ಆನುವಂಶಿಕವಾಗಿ ಬಂದ ಸಂಪ್ರದಾಯದಂತೆ ಹಿರಿಯ ಮಗ ರಾಮನಿಗೆ ಪಟ್ಟವನ್ನು ಕಟ್ಟಿ ತಾನು ವಾನಪ್ರಸ್ಥಾಶ್ರಮಕ್ಕೆ ಹೋಗಲು ನಿಶ್ಚಯಿಸಿದನು. ಒಂದು ದಿನ ಪಟ್ಟಾಭಿಷೇಕಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಲು ತನ್ನ ಮಂತ್ರಿಗಳಿಗೆ ಆಜ್ಞೆಯನ್ನೂ ಮಾಡಿದನು. ಅರಮನೆಯಲ್ಲಿ ಎಲ್ಲೂ ಇಲ್ಲದ ಸಡಗರ ! ಪುರೋಹಿತರು ಅಭಿಷೇಕಜಲದೊಡನೆ ನೆರೆದರು. ಆ ಸಮಾರಂಭವನ್ನು ವೀಕ್ಷಿಸಲು ಪೌರರೂ ಬಂದರು. ಪಟ್ಟಾಭಿಷೇಕೋತ್ಸವದ ಅಂಗವಾಗಿ ಸಮಯೋಚಿತವಾದ ನಾಟಕವನ್ನಾಡಲು ನಟರಿಗೆ ಆಜ್ಞೆಯಾಯಿತು.

ರಾಮನಿಗೆ ರಾಜ್ಯವೊಪ್ಪಿಸಿ ತಾನು ಕಾಡಿಗೆ ತೆರಳಬೇಕೆಂಬುದು ದಶರಥನ ಆಶಯವಾದರೆ ವಿಧಿಸಂಕಲ್ಪ ಬೇರೆ ತೆರನಾಗಿತ್ತು. ಅವನಿಗೆ ಪುತ್ರ ಶೋಕದಿಂದಲೇ ಮರಣ ಬರಲೆಂಬ ಶಾಪವೊಂದಿತ್ತು.

ಹಿಂದೊಮ್ಮೆ ದಶರಥನು ಬೇಟೆಯಾಡಲು ಕಾಡಿಗೆ ಹೋಗಿದ್ದನು. ಯಜ್ಞದತ್ತನೆಂಬ ಋಷಿ ಕುಮಾರನೊಬ್ಬನು ಕುರುಡರಾದ ತನ್ನ ತಾಯಿ ತಂದೆಯರನ್ನು ತೀರ್ಥಯಾತ್ರೆಗೆಂದು ಹೊತ್ತುಕೊಂಡು ಹೋಗುತ್ತಾ ಆ ಕಾಡಿನಲ್ಲಿ ಬಂದನು.

ಅವನು ತಾಯಿತಂದೆಯರನ್ನು ಒಂದಡೆ ಕೂರಿಸಿ ನೀರು ತರಲು ಕಾಡಿನ ಕೊಳ ವೊಂದಕ್ಕೆ ಹೋಗಿ ಕೊಡದಲ್ಲಿ ನೀರು ತುಂಬುತ್ತಿದ್ದನು. ಮೃಗಯಾವ್ಯಸನಿ ಯಾದ ದಶರಥನಿಗೆ ಋಷಿಕುಮಾರನು ನೀರು ತುಂಬುವ ಶಬ್ದ ಘೀಳಿಡುವ ಕಾಡಾನೆಯ ಶಬ್ದದಂತೆ ಕೇಳಿಸಿತು. ಕಾಡಾನೆಯೇ ಇರಬೇಕೆಂದು ಕೂಡಲೇ ಶಬ್ದವೇಧಿ ಬಾಣದಿಂದ ಅವನನ್ನು ಕೊಂದುಬಿಟ್ಟನು. ಮಗನ ಮರಣದಿಂದ ದುಃಖಸಂತಪ್ತನಾದ ಋಷಿಯು "ಪುತ್ರ ಶೋಕದಿಂದ ಹೇಗೆ ನಾವು ಅಳಿಯು ತ್ತೀವೆಯೊ ಹಾಗೆ ನೀನೂ ಪುತ್ರ ಶೋಕದಿಂದಲೇ ಸಾಯಿ" ಎಂದು ದಶರಥನನ್ನು ಶಪಿಸಿದನು.

ತ್ರಿಕಾಲಜ್ಞಾನಿಗಳಾದ ವಸಿಷ್ಠ, ವಾಮದೇವಾದಿಗಳಿಗೆ ಆ ಶಾಪ ವೃತ್ತಾಂತವು ತಿಳಿದಿತ್ತು. ಶಾಪದಿಂದ ದಶರಥನು ದುಃಖಿತನಾದರೂ ಕಾಲ ಉರುಳಿದಂತೆ ಹೇಗೂ ಅದನ್ನು ಮರೆತುಬಿಟ್ಟಿದ್ದನು. ಮುಪ್ಪು ಬಂದು ರಾಜ್ಯವನ್ನು ತೊರೆ ಯಲು ಅವನು ಸಿದ್ಧನಾದನು. ರಾಜನ ಅವಸಾನ ಸನ್ನಿಹಿತವಾಯಿತೆಂದು ವಸಿಷ್ಠ, ವಾಮದೇವರು ಅರಿತರು. ಆ ಶಾಪದ ಪ್ರಕಾರ ರಾಜನಿಗೆ ಪುತ್ರಶೋಕ ದಿಂದಲೇ ಸಾವು ಬರಬೇಕಾಗಿತ್ತು. ರಾಮನು ದಶರಥನ ಪ್ರೀತಿಪಾತ್ರನಾದ, ಪ್ರಾಣಸಮಾನನಾದ ಪುತ್ರ. ಪುತ್ರಶೋಕದಿಂದಲೇ ಮರಣವೆಂದಮೇಲೆ ರಾಮನ ಶೋಕದಿಂದಲೇ ರಾಜನಿಗೆ ಮರಣವೆಂದು ವಸಿಷ್ಠ, ವಾಮದೇವರು ನಿಶ್ಚಯಿಸಿದರು. ಶಾಪ ನೆರವೇರಬೇಕಾದರೆ ರಾಮನಿಗೆ ಕೇಡು ತಪ್ಪಿದ್ದಲ್ಲವೆಂದು ಅವರು ಊಹಿಸಿದರು. ಆ ಕೇಡು ರಾಮನ ಭಾಗಕ್ಕೆ ಆಕಸ್ಮಿಕ ಮರಣವಾದರೂ ಆಗಬಹುದಾಗಿತ್ತು. ಹೇಗಾದರೂ ರಾಜನ ಮರಣ ಅನಿವಾರವಾಗಿತ್ತು.

ಆದ್ದರಿಂದ ಕುಲಗುರುಗಳಾದ ವಸಿಷ್ಠ, ವಾಮದೇವರು ಮಂತ್ರಿ ಸುಮಂತ್ರ ನೊಡನೆ ಆಲೋಚಿಸಿ, ರಾಜನನ್ನು ರಕ್ಷಿಸಲಾಗದಿದ್ದರೂ ನಿರಪರಾಧಿಯಾದ ರಾಮನನ್ನು ರಕ್ಷಿಸುವ ಉಪಾಯವನ್ನು ಹೂಡಿದರು. ರಾಜನಿಗೆ ಪುತ್ರಶೋಕ ವುಂಟಾಗಬೇಕಾದರೆ ರಾಮನನ್ನು ಅಗಲಿಸಲೇಬೇಕಾಗಿತ್ತು. ಏಕೆಂದರೆ ರಾಜನು ರಾಮನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಭರತ ಶತ್ರುಘ್ನರು ತಮ್ಮ ಸೋದರಮಾವನ ಮನೆಯಲ್ಲಿದ್ದುದರಿಂದ ಅವರ ಅಗಲಿಕೆ ರಾಜನಿಗೆ ಸ್ವಾಭಾವಿಕ ವಾಗಿಯೇ ಒಗ್ಗಿಹೋಗಿತ್ತು. ರಾಮನನ್ನು ರಾಜನಿಂದ ಅಗಲಿಸಲು ಕೈಕೆಯೀ ಸಮರ್ಥಳೆಂದು ಅವರು ಯೋಚಿಸಿ ತಮ್ಮ ಪ್ರಯತ್ನದಲ್ಲಿ ಅವಳನ್ನೂ ಸೇರಿಸಿ ಕೊಂಡರು. ರಾಮನ ಹಿತಕ್ಕಾಗಿ ಬೇರೆ ಉಪಾಯವಿಲ್ಲದುದರಿಂದ ಕೈಕೆಯೂ ಒಪ್ಪಿಕೊಂಡಳು.

ಅಲ್ಲದೆ ದಶರಥನು ವಚನಭ್ರಷ್ಟನಾಗದಂತೆ ವಸಿಷ್ಠರು ನೋಡಿಕೊಳ್ಳಬೇಕಾಗಿತ್ತು. ಹಿಂದೆ ಕೈಕೆಯನ್ನು ಮದುವೆಯಾಗುವಾಗ ದಶರಥನು ಅವಳ ಹೊಟ್ಟೆಯಲ್ಲಿ ಹುಟ್ಟುವ ಮಗನಿಗೆ ರಾಜ್ಯಾಭಿಷೇಕ ಮಾಡುವುದಾಗಿ ಒಪ್ಪಿ ಅವಳಿಗೆ ಭಾಷೆ ಕೊಟ್ಟಿದ್ದನು. ಆ ವಿಷಯ ರಾಮನಾದಿಯಾಗಿ ಎಲ್ಲರಿಗೂ ತಿಳಿದಿತ್ತು. ಆದರೆ ರಾಜನು ತಾನು ಕೊಟ್ಟ ವಚನವನ್ನು ಮರೆತಂತೆ ಇದ್ದನು. 7696

ಆಸ್ಥಾನದಲ್ಲಿ ಪಟ್ಟಾಭಿಷೇಕ ಕಾರ್ಯಗಳು ಜರುಗುತ್ತಿದ್ದಾಗ ಸೀತೆಯು ಅಂತಃಪುರದಲ್ಲಿದ್ದಳು. ಅವದಾತಿಕೆಯೆಂಬುವಳು ನೇಪಥ್ಯಗೃಹದ ಅಧಿಕಾರಿಣಿಯಾದ ರೇವೆಯನ್ನು ಮೋಸಗೊಳಿಸಿ ಹಳೆಯ ನಾರುಡೆಯನ್ನು ಅವಳು ಕಾಣದಂತೆ ತೆಗೆದುಕೊಂಡು ಬರುತ್ತಿದ್ದಾಗ ಸೀತೆಗೆ ಸಿಕ್ಕಿಬಿದ್ದಳು. ಅವದಾತಿಕೆಗೆ ಹಾಗೆ ತರಬಾರದೆಂದೂ ಅದನ್ನು ಹಿಂದಿರುಗಿಸಬೇಕೆಂದೂ ಸೀತೆ ಬುದ್ಧಿ ಹೇಳಿದಳು. ಬಳಿಕ ಕುತೂಹಲದಿಂದ ನಾರುಡೆಯನ್ನು ಅವಳು ಈಸಿಕೊಂಡು ತನಗೆ ಒಪ್ಪುತ್ತದೆಯೊ ಇಲ್ಲವೊ ಎಂಬುದನ್ನು ಪರೀಕ್ಷಿಸಲು ಅದನ್ನು ತಾನೇ ಉಟ್ಟುಕೊಂಡಳು. ಸಹಜ ಸುಂದರಿಯೂ ತರುಣಿಯೂ ಆದ ಸೀತೆಗೆ ನಾರುಡೆಯೇ ಪೊನ್ನುಡೆಯಂತೆ ಶೋಭಿಸಿತು. ಸೀತೆಯು ಕನ್ನಡಿಯನ್ನು ತರಿಸಿ ತನ್ನ ನೂತನ ವಸ್ತ್ರಾಲಂಕಾರವನ್ನು ನೋಡಿಕೊಳ್ಳುತ್ತಿದ್ದಳು.

ಅಷ್ಟರಲ್ಲಿ ಅಲ್ಲಿಗೆ ಚೇಟಿಯು ಬಂದು ಸೀತೆಗೆ ರಾಮನ ಪಟ್ಟಾಭಿಷೇಕದ ಶುಭವಾರ್ತೆಯನ್ನು ಹೇಳಿದಳು. ಇದನ್ನು ಕೇಳಿದ ಸೀತೆಗೆ ಹರ್ಷಕ್ಕೆ ಬದಲು ಕಳವಳವಾಯಿತು. ಮಾವನೇ ತಂದೆಯೆಂದು ತಿಳಿದಿದ್ದ ಆ ಮಹಾಸಾಧ್ವಿಗೆ ರಾಮನಿಗೆ ಪಟ್ಟಾಭಿಷೇಕವಾಗಬೇಕಾದರೆ ಮಾವನ ಕ್ಷೇಮ ಎಂತೋ ಎಂಬ ಕಾತರ. ಆದ್ದರಿಂದ ಕೂಡಲೆ "ಮಾವನಿಗೆ ಕುಶಲವೆ ?" ಎಂದು ಉದ್ವಿಗ್ನಳಾಗಿ ಕೇಳಿದಳು. ಮಹಾರಾಜನೇ ಅಭಿಷೇಕವನ್ನು ಮಾಡುವನೆಂದು ಚೇಟಿ ಉತ್ತರಿಸಲು ಹರ್ಷಿತಳಾದ ಸೀತೆ ತನ್ನ ಮೈ ಮೇಲಿನ ಆಭರಣಗಳನ್ನು ಕಳೆದು ಅವಳಿಗೆ ಮೆಚ್ಚುಕೊಟ್ಟಳು.

ಆಗ ಅರಮನೆಯಲ್ಲಿ ಪಟಹ ಶಬ್ದ ಭೋರ್ಗರೆದು ತಟ್ಟನೆ ನಿಂತುಹೋಯಿತು. "ಅಭಿಷೇಕಕ್ಕೆ ಈಗ ಏನು ತಡೆ ಬಂತೊ! ಅಥವಾ ಅರಮನೆಗಳಲ್ಲಿ ಏನು ಬೇಕಾದರೂ ನಡೆಯಬಹುದು" ಸೀತೆ ಹೇಳಿದಳು.

"ಒಡತಿ, ಅಭಿಷೇಕವಾದ ಮೇಲೆ ಮಹಾರಾಜರು ಕಾಡಿಗೆ ಹೋಗುತ್ತಾರೆಂದು ಕೇಳಿದ್ದೆ" ಎಂದು ಚೇಟಿ ಹೇಳಿದಳು.

ಮಾವನು ಕಾಡಿಗೆ ಹೋಗುವುದು ಸೀತೆಗೆ ಇಷ್ಟವಿಲ್ಲ. ಆದ್ದರಿಂದ ಅವಳು "ಅದು ಅಭಿಷೇಕದ ನೀರಲ್ಲ, ಕಣ್ಣೀರನ್ನು ತೊಳೆಯುವ ನೀರು" ಎಂದಳು.

ಇತ್ತ ಪುರೋಹಿತರು, ಮಂತ್ರಿಗಳು, ಪ್ರಜೆಗಳೇ ಮೊದಲಾದವರಿಂದ ತುಂಬಿದ್ದ ಸಭೆಯಲ್ಲಿ ದಶರಥನು ರಾಮನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಪ್ರೀತಿಯಿಂದ "ಕಂದ, ರಾಮ, ರಾಜ್ಯವನ್ನು ಸ್ವೀಕರಿಸಪ್ಪ" ಎಂದನು. ಅಭಿಷೇಕ ಮಾಡಿಸಿಕೊಳ್ಳಲು ರಾಮನಿಗೆ ಸ್ವಲ್ಪವೂ ಇಷ್ಟವಿಲ್ಲ. ಪಟ್ಟಗಟ್ಟಿದ ಮೇಲೆ ತಂದೆಯು ಕಾಡನ್ನು ಕುರಿತು ತೆರಳುವವನಾಗಿದ್ದನು. ಇಷ್ಟು ಬೇಗ ತಂದೆಯ ನ್ನಗಲಲು ಪಿತೃಭಕ್ತನಾದ ರಾಮನು ಹೇಗೆ ಒಪ್ಪಿಯಾನು? ಆಗ ಅವನ ದುಃಖಕ್ಕೆ ಮಿತಿಯಿಲ್ಲ. ಏನನ್ನೂ ಹೇಳಲಾರದೆ ಅವನು ತಂದೆಯ ಕಾಲಮೇಲೆ ಕುಸಿದು ಅವನ್ನು ಕಂಬನಿಯಿಂದ ತೋಯಿಸಿದನು. ದಶರಥನ ಕಣ್ಣೀರು ರಾಮನ ತಲೆಯನ್ನು ತೋಯಿಸಿತು. ಇನ್ನೂ ಕೆಲವು ಕಾಲ ತಂದೆಯ ಎದುರಿನಲ್ಲಿ ಬಾಲಕನಾಗಿರಬೇಕೆಂಬುದು ರಾಮನ ಇಷ್ಟ. ಸುಲಭವಾಗಿ ಅಭಿಷೇಕಕ್ಕೆ ಒಪ್ಪಲೊಲ್ಲನು. ಅಷ್ಟಕ್ಕೆ ದಶರಥನು ಸುಮ್ಮನಾಗಲಿಲ್ಲ. ತನ್ನ ಜೀವದ ಮೇಲೆಯೇ ಆಣೆ ಇಟ್ಟುಬಿಟ್ಟನು. ಮಗನ ಬಾಯಿ ಕಟ್ಟಿತು. ಆಗ ಮಹಾರಾಜನು ಅಭಿಷೇಕಮಾಡಲು ಜಲದೊಡನೆ ಸಿದ್ಧನಾದನು. ಕೈಕೆಯ ದಾಸಿಯಾದ ಮಂಥರೆಯು ಅಲ್ಲಿಗೆ ಅಷ್ಟರಲ್ಲಿ ಬಂದು ಮಹಾರಾಜನ ಕಿವಿಯಲ್ಲಿ ಏನನ್ನೋ ಹೇಳಿದಳು. ಅಲ್ಲೆ ಅಭಿಷೇಕವನ್ನು ನಿಲ್ಲಿಸಿ "ಮಗು, ಸ್ವಲ್ಪ ವಿಶ್ರಮಿಸಿಕೊ" ಎಂದು ಹೇಳಿ ರಾಜನು ಆಗಲೇ ಅಂತಃಪುರಕ್ಕೆ ಹೋದನು.

ಅಭಿಷೇಕ ತಪ್ಪಿದುದರಿಂದ ರಾಮನಿಗೆ ಸಂತೋಷವಾಗದಿರಲಿಲ್ಲ. ಅವನಿಗೆ ಅದೇ ಬೇಕಾಗಿದ್ದುದು. ಅವನ ಮನಸ್ಸಿಗೆ ನೆಮ್ಮದಿಯಾಯಿತು. ತಂದೆಯ ಮಾತಿನಂತೆ ಅವನು ರಾಜಾಸ್ಥಾನದಿಂದ ಹೊರಟಾಗ ಜನರು "ಇದು ಆಶ್ಚರ್ಯ, ಆಶ್ಚರ್ಯ" ಎಂದರು. ತಂದೆಯ ಮಾತನ್ನು ಪಾಲಿಸುವುದು ಆಶ್ಚರ್ಯವೇ ಎಂದು ಅವನು ವಿಸ್ಮಿತನಾದನು. "ನಾನು ಮೊದಲಿನಂತೆ ರಾಮನೇ ಆಗಿ ಮಹಾರಾಜನು ಮಹಾರಾಜನೇ ಆಗಿರುವುದು ನನ್ನ ಭಾಗ್ಯ" ಎಂದುಕೊಳ್ಳುತ್ತ ಸೀತೆಯನ್ನು ನೋಡಲು ಅವನು ಅಂತಃಪುರಕ್ಕೆ ಹೋದನು.

ರಾಮನು ಅಭಿಷೇಕದ ವೃತ್ತಾಂತವನ್ನೆಲ್ಲಾ ಸೀತೆಗೆ ಹೇಳಿದಾಗ ಅವಳಿಗೆ ವ್ಯಥೆಯಾಗಲಿಲ್ಲ. "ಇದು ನನಗೆ ಪ್ರಿಯವಾದದ್ದು. ಮುಂದೆಯೂ ಆರ್ಯಪುತ್ರ ಆರ್ಯಪುತ್ರನೆ, ಮಹಾರಾಜ ಮಹಾರಾಜನೆ" ಎಂದಳು ಸಂತೋಷದಿಂದ.

ನಿರಾಭರಣಳಾದ ಸೀತೆಯನ್ನು ನೋಡಿ ರಾಮನು "ನಾನೇ ಕನ್ನಡಿ ಹಿಡಿಯು ತ್ತೇನೆ, ಒಡವೆಗಳನ್ನಿಟ್ಟುಕೊ" ಎಂದು ಹೇಳಿ ಅವಳ ನಾರುಡೆಯನ್ನು ಸ್ಪರ್ಶಿಸಿ "ಮೈಥಿಲಿ, ಇದೇನು ! ಇಕ್ಷ್ವಾಕುಗಳ ವೃದ್ಧಾಲಂಕಾರವನ್ನು ಧರಿಸಿದ್ದೀಯೆ ! ಇದನ್ನು ಕಂಡರೆ ನನಗೂ ಪ್ರೀತಿ. ಒಂದನ್ನು ನನಗೂ ಕೊಡು" ಎಂದನು. ಅಭಿಷೇಕ ತಪ್ಪಿದ ಆರ್ಯಪುತ್ರನಿಗೆ ನಾರುಡೆ ಅಮಂಗಳವೆನಿಸಿತು, ಅವಳಿಗೆ. ಆದಕ್ಕೆ ರಾಮನು "ನೀನು ಉಟ್ಟಮೇಲೆ ನನ್ನ ಅರ್ಧ ದೇಹ ಉಟ್ಟಂತಲ್ಲವೆ ?" ಎಂದನು.)

ದಶರಥನು ಮಂಥರೆಯೊಡನೆ ಕೈಕೆಯ ಅಂತಃಪುರಕ್ಕೆ ಕಾತರದಿಂದ ಹೋದನು. ಯಾವಾಕೆ ಯಾವಾಗಲೂ ಮುಗುಳ್ನಗೆಯಿಂದ ಇನಿಯನನ್ನು ಸ್ವಾಗತಿಸುತ್ತಿದ್ದಳೊ ಆ ಕೈಕೆಯೇ ಹುಸಿ ಮುನಿಸನ್ನು ನಟಿಸುತ್ತ ಮಲಗಿದ್ದಳು. ತನ್ನ ಒಲವಿನ ರಾಣಿಯ ಪಕ್ಕದಲ್ಲಿ ಕುಳಿತು ಮಹಾರಾಜನು ಅವಳ ಅಸ್ವಸ್ಥತೆಗೆ ಕಾರಣ ಕೇಳಿದನು. ಕೈಕೆಗಾದರೊ ಉಭಯಸಂಕಟ. ಗುರುಗಳ ಮಾತನ್ನು ಮೀರದೆ ಅವರ ಸಲಹೆಯಂತೆ ನಡೆಯಬೇಕಾಗಿತ್ತು. ಯಾರನ್ನು ತನ್ನ ಮಗನಂತೆ ಪ್ರೀತಿಸುತ್ತಿದ್ದಳೊ ಆ ರಾಮನನ್ನೇ ಕಾಡಿಗೆ ಅಟ್ಟಿ ತನ್ನ ಧರ್ಮಪತಿಯ ಮರಣಕ್ಕೆ ಕಾರಣಳಾಗಿ ಅದನ್ನು ತಾನೇ ಕಣ್ಣಾರೆ ನೋಡಬೇಕಾಗಿತ್ತು. ಹೇಳುವುದಕ್ಕಿಲ್ಲ ಬಿಡುವುದಕ್ಕಿಲ್ಲ. ಅವಳ ಹೆಣ್ಣು ಹೃದಯ ಮೊದಲು ಅಳುಕಿತು.

ಮಹಾರಾಜನಿಗಾದರೊ ಆತುರ. "ನಿನಗೇನಾಗಿದೆ ? ಏನಾಗಬೇಕು ?" ಎಂದು ಪದೇ ಪದೇ ಪ್ರಶ್ನಿಸುತ್ತಿದ್ದನು.

ಆಕೆಗೆ ತಾನು ನಿರ್ವಹಿಸಬೇಕಾದ ಕಾರ್ಯಗೌರವದ ನೆನಪಾಯಿತು. ಉದ್ವಿಗ್ನ ಚಿತ್ತಳಾಗಿ "ನೀನು ಕೊಟ್ಟಿದ್ದ ಮಾತಿನಂತೆ ನನ್ನ ಮಗ ಭರತನಿಗೆ ಪಟ್ಟವಾಗಲಿ" ............ಎಂದು ಅರ್ಧಕ್ಕೇ ನಿಲ್ಲಿಸಿದಳು.

ಮಹಾರಾಜನ ಮುಖ ಕಪ್ಪಿಟ್ಟಿತು. ಅವಳು ಗದ್ಗದಿಸುತ್ತ ಮುಂದೆ "ರಾಮನು ಹದಿನಾಲ್ಕು ವರ್ಷ ಕಾಡಿಗೆ ಹೋಗಲಿ" ಎಂದುಬಿಟ್ಟಳು. ಇದನ್ನು ಕೇಳುತ್ತಿದ್ದಂತೆಯೇ ಮಹಾರಾಜನು ಶೋಕಾತಿರೇಕದಿಂದ ಮತ್ತೆ ಮತ್ತೆ ಮೂರ್ಛಿತನಾದನು. ಒತ್ತಿ ಬರುವ ತನ್ನ ದುಃಖವನ್ನು ಬಿಗಿಹಿಡಿದುಕೊಂಡು ಅರಸನ ಸೇವೆಗೆ ಕೈಕೆ ನಿಂತಳು. ಅರಮನೆಯಲ್ಲೆಲ್ಲಾ ಹಾಹಾಕಾರವೆದ್ದಿತು. ರಾಣಿಯರೆಲ್ಲಾ ಧಾವಿಸಿ ಬಂದು ರಾಜನ ಕೊನೆಯ ಸೇವೆಗೆ ನಿಂತರು. ಅಪರಾಧಿನಿಯಂತೆ ಕೈಕೆ ತಲೆ ತಗ್ಗಿಸಿ ನೀರವವಾದಳು.

ಕಂಚುಕಿ ಸೀತೆಯ ಅಂತಃಪುರಕ್ಕೆ ಓಡಿ ಬಂದು ಮಹಾರಾಜನನ್ನು ಕಾಪಾಡಬೇಕೆಂದು ಸೀತಾರಾಮರಿಗೆ ಮೊರೆಯಿಟ್ಟನು. ಅಪಾಯ ಯಾರ ದೆಸೆಯಿಂದ ಎಂದು ರಾಮನು ಕೇಳಲು ಸ್ವಜನಳಾದ ಕೈಕೆಯಿಂದ ಎಂದು ಅವನುತ್ತರಿಸಿದನು. ತನ್ನ ತಾಯಿಯಲ್ಲಿದ್ದಷ್ಟೇ ಕೈಕೆಯಲ್ಲಿಯೂ ರಾಮನಿಗೆ ವಾತ್ಸಲ್ಯವಿತ್ತು. ಋಜು ಸ್ವಭಾವದ ರಾಮನಿಗೆ ಕೈಕೆಯು ಎಂದಿಗೂ ಅಕಾರ್ಯ ಮಾಡಲಾರಳೆಂಬ ದೃಢ ನಂಬಿಕೆ. ತಾಯಿಯ ದೆಸೆಯಿಂದಾಗಿದ್ದರೆ ಸದುದ್ದೇಶದಿಂದಲೇ ಆಗಿರಬೇಕೆಂದು ರಾಮನು ಹೇಳಿದನು.

ಆದರೆ ರಾಮಪಕ್ಷಪಾತಿಯಾದ ಕಂಚುಕಿಗೆ ಮಹಾ ಸಂಕಟವಾಯಿತು. ಅವನು ನಿಷ್ಠುರನಾಗಿ "ಅವಳ ದೆಸೆಯಿಂದಲೇ ನಿನ್ನ ಅಭಿಷೇಕ ತಪ್ಪಿತು" ಎಂದನು. ಅದಕ್ಕೆ "ಒಳ್ಳೆಯದೇ ಆಯಿತು. ಅದರಿಂದ ಮಹಾರಾಜನು ಕಾಡಿಗೆ ಹೋಗುವುದು ತಪ್ಪಿತು" ರಾಮನು ಸಮಾಧಾನದಿಂದ ಹೇಳಿದನು.

"ಅಷ್ಟೇ ಅಲ್ಲ, ಭರತನಿಗೆ ಪಟ್ಟಾಭಿಷೇಕ ಮಾಡಬೇಕೆಂದು ಹೇಳಿದಳು. ಇದು ಲೋಭವಲ್ಲವೆ ?" ಎಂದು ಕಂಚುಕಿ ಕೇಳಿದುದಕ್ಕೆ "ಕನ್ಯಾಶುಲ್ಕಕ್ಕಾಗಿ ಭರತನಿಗೆ ಸೇರಬೇಕಾದ ರಾಜ್ಯಕ್ಕೆ ನಾನು ಆಶಿಸಿದ್ದು ನನ್ನ ಲೋಭವಲ್ಲವೆ ? ಇನ್ನು ತಾಯ ನಿಂದೆಯನ್ನು ಕೇಳಲಾರೆ" ಎಂದು ಮುಂದೆ ಮಾತಾಡಲು ಪ್ರಯತ್ನಿಸಿದ ಕಂಚುಕಿಯನ್ನು ತಡೆದು ತನ್ನ ಕಿವಿಗಳನ್ನು ರಾಮನು ಮುಚ್ಚಿಕೊಂಡು "ಮಹಾರಾಜನ ವೃತ್ತಾಂತವನ್ನು ಮಾತ್ರ ಹೇಳು" ಎಂದನು. ಆಗ ಕಂಚುಕಿಯು ಮಹಾರಾಜನು ಮಾತನಾಡಲಾರದೆ ಮೂರ್ಛೆಗೆ ಸಂದನೆಂದನು.

ಅಷ್ಟರಲ್ಲಿ ಅರಮನೆಯಲ್ಲಿ ಹಾಹಾಕಾರವೆದ್ದಿತು. ಧನುರ್ಬಾಣಪಾಣಿಯಾದ ಲಕ್ಷ್ಮಣನು ಕೆರಳಿದ ಕೇಸರಿಯಂತೆ ಕೋಪಾರುಣನೇತ್ರನಾಗಿ "ಹೆಣ್ಣಿನ ಹೆಸರಿಲ್ಲದಂತೆ ಮಾಡುತ್ತೇನೆ" ಎಂದು ಗರ್ಜಿಸುತ್ತ ರಾಮನ ಬಳಿಗೆ ಬಂದನು.

ತಮ್ಮನ ಅಪೂರ್ವ ಸಾಹಸ, ಕೋಪಗಳನ್ನು ನೋಡಿ ರಾಮನು "ತಮ್ಮ, ಸತ್ಯವಂತನಾದ ತಂದೆಯನ್ನು ಶಿಕ್ಷಿಸುವುದೆ ? ತನಗೆ ಸಲ್ಲಬೇಕಾದ ಕನ್ಯಾಶುಲ್ಕವನ್ನು ಕೇಳಿದ ತಾಯಿಯನ್ನು ಶಿಕ್ಷಿಸೋಣವೆ ? ಅಥವಾ ನಿರಪರಾಧಿಯಾದ ತಮ್ಮನನ್ನು ಕೊಲ್ಲೋಣವೆ ? ನೀನು ಕೋಪಿಸಿಕೊಂಡರೆ ಈಗ ಕಾರ್ಯವಾಗದು. ಶಾಂತನಾಗು" ಎಂದು ಸಂತೈಸಿದನು.

ಲಕ್ಷ್ಮಣನ ಕೋಪಕ್ಕೆ ಅಣ್ಣನಿಗೆ ರಾಜ್ಯ ತಪ್ಪಿದುದು ಕಾರಣವಲ್ಲ. ಯಾವ

ಅಪರಾಧವನ್ನೂ ಮಾಡದ ಅಣ್ಣನು ಅನ್ಯಾಯವಾಗಿ ಕಾಡಿನಲ್ಲಿ ಕಷ್ಟಪಡಬೇಕಲ್ಲ ಎಂಬ ಮಹಾವ್ಯಥೆ.

ಕೈಕೆಯ ಅಪೇಕ್ಷೆಯನ್ನು ಕಂಚುಕಿಯ ಬಾಯಿಂದ ಕೇಳಿದ ರಾಮನು ವನವಾಸಕ್ಕೆ ಆಗಲೇ ಸಿದ್ಧನಾದನು. ಅನ್ಯನೃಪರು ಅನುಸರಿಸದ ಧರ್ಮವನ್ನು ಕೈಗೊಳ್ಳುವೆನೆಂದು ನಾರುಡೆಯನ್ನು ಸೀತೆಯಿಂದ ತೆಗೆದುಕೊಂಡು "ಮೈಥಿಲಿ, ನೀನೇನು ಮಾಡಬೇಕೆಂದಿರುವೆ ?" ಎಂದನು.

ಅದಕ್ಕೆ ಅವಳ ಉತ್ತರ "ನಾನು ನಿನ್ನ ಸಹಧರ್ಮಚಾರಿಣಿಯಷ್ಟೆ ? ಆದ್ದರಿಂದ ನಾನೂ ಹಿಂಬಾಲಿಸಿ ಬರುತ್ತೇನೆ" ಎಂದು.

ತಾನು ಕಷ್ಟಪಡುವುದಲ್ಲದೆ ಅವಳೂ ಕಷ್ಟಪಡುವಳಲ್ಲ ಎಂದು ರಾಮನು ಮರುಗಿ ಅರಣ್ಯದ ಭೀಕರತೆಯನ್ನೂ ಕಷ್ಟಕಾರ್ಪಣ್ಯಗಳನ್ನೂ ತಿಳಿಸಿ ತಡೆಯಲು ಪ್ರಯತ್ನಿಸಿದನು. ಆದರೆ ಸೀತೆಯು ಪತಿಯಿರುವ ಕಾಡೇ ಅರಮನೆಯೆಂದು ವನವಾಸದ ಬವಣೆಯನ್ನೇ ಅಪ್ಪಿದಳು.

"ನೀನು ಅತ್ತೆಮಾವಂದಿರ ಶುಶ್ರೂಷೆಯನ್ನು ಮಾಡಬೇಕಲ್ಲವೆ ?" ಎಂದು ರಾಮನು ಕೇಳಲು "ಈ ವಿಷಯದಲ್ಲಿ ದೇವತೆಗಳಿಗೆ ಕೈಮುಗಿಯುತ್ತೇನೆ" ಎಂದು ಬಿಟ್ಟಳು.

ಬಳಿಕ ಅವಳನ್ನು ತಡೆಯಲು ಲಕ್ಷ್ಮಣನಿಗೆ ರಾಮನು ಹೇಳಿದನು. ಅದಕ್ಕೆ ಲಕ್ಷ್ಮಣನು "ಸ್ವಧರ್ಮವನ್ನಾಚರಿಸಲು ಅವಳು ಬರಲಿ. ಅವಳನ್ನು ತಡೆಯಲು ನಾನು ಮುಂದಾಗುವುದಿಲ್ಲ" ಎಂದನು.

ಅಷ್ಟರಲ್ಲಿ ಸೀತೆಯು ಮೈಲಿಗೆಯಾದ ನಾರುಡೆಯನ್ನು ಉಟ್ಟಿರುವಳೆಂದು ತಿಳಿದ ನೇಪಥ್ಯಶಾಲಿನ್ಯಧಿಕಾರಿಣಿಯು ಸೀತೆಗೆಂದು ಚೇಟಿಯ ಕೈಯಲ್ಲಿ ಹೊಸ ನಾರುಡೆಯನ್ನು ಕಳುಹಿಸಿದಳು. ಅವುಗಳಲ್ಲಿ ಒಂದನ್ನು ತೆಗೆದುಕೊಂಡು ರಾಮನು ಉಟ್ಟುಕೊಂಡನು.

"ಅಣ್ಣಾ, ಯಾವ ವಸ್ತ್ರವಿಭೂಷಣವಿದ್ದರೂ ಅರ್ಧವನ್ನು ನನಗೆ ಕೊಡುತ್ತಿದ್ದ ನಿನಗೆ ನಾರುಡೆಯಲ್ಲಿ ಮತ್ಸರವಾಯಿತೆ ? ನನಗೂ ಕೊಡು" ಎಂದು ದೈನ್ಯದಿಂದ ಬೇಡುವ ಲಕ್ಷ್ಮಣನನ್ನು ರಾಮನ ಮಾತಿನಂತೆ ಸೀತೆಯು ತಡೆದಳು.

"ಅಗ್ರಜನ ದಕ್ಷಿಣಪಾದವನ್ನು ನೀನು ಸೇವಿಸು, ನಾನು ವಾಮಪಾದವನ್ನು ಸೇವಿಸುವೆನು" ಎಂದು ಲಕ್ಷ್ಮಣನು ಹೇಳಿ ಮತ್ತೆ ಬೇಡಿದನು.

ಸಹೋದರ ಪ್ರೇಮದಿಂದ ಕಟ್ಟುಬಿದ್ದ ರಾಮನು ಸುಮ್ಮನಾದನು. ಸೀತಾರಾಮಲಕ್ಷ್ಮಣರು ವಲ್ಕಲವಸನಧಾರಿಗಳಾಗಿ ಕಾಡಿಗೆ ಹೊರಟರು. ಹೋಗುವ ಮುನ್ನ ತಂದೆತಾಯಿಯರಿಗೆ ನಮಸ್ಕರಿಸಿ ಅವರ ಹರಕೆಯನ್ನೂ ಪಡೆಯಲಾಗಲಿಲ್ಲ. ದುಃಖಸಂತಪ್ತನಾದ ತಂದೆಯನ್ನೂ ಅವನನ್ನು ಸುತ್ತುಗಟ್ಟಿ ಉಪಚರಿಸುವ ತಾಯಿಯರನ್ನೂ ಬಿಟ್ಟುಹೋಗುವ ಬಗೆ ಹೇಗೆ! ದಶರಥನು ತಾನೆ ಹೇಗೆ ಮಕ್ಕಳಿಗೆ ಕಾಡಿಗೆ ಹೋಗಲು ಅಪ್ಪಣೆ ಕೊಟ್ಟಾನು! ಒಮ್ಮೆ ತಾಯಿಯ ಅಂತಃಪುರಕ್ಕೆ ಹೋದಮೇಲೆ ಅಲ್ಲಿಂದ ಹೊರಡುವುದು ದುಸ್ಸಾಧ್ಯ. ಆದ್ದರಿಂದ ಅವರು ಅಲ್ಲಿಗೆ ಹೋದರೆ ವನಪ್ರಯಾಣಕ್ಕೆ ಅಡ್ಡಿಯಾಗಬಹುದೆಂದು ಕಡೆಯ ಬಾರಿಗೆ ತಂದೆಯನ್ನೂ ನೋಡದೆ ಅಂತಃಪುರದಿಂದ ನೇರವಾಗಿ ಕಾಡಿಗೆ ತೆರಳಿದರು.

ಮಕ್ಕಳು ಹೊರಟ ಸುದ್ದಿಯನ್ನು ಕೇಳಿದ ದಶರಥನು ತಟ್ಟನೆ ಪರ್ಯಂಕದಿಂದ ಮೇಲೆದ್ದು ಅಸ್ತವ್ಯಸ್ತವಾದ ತಲೆಗೂದಲಿನೊಡನೆ ಎಡವುವುದನ್ನೂ ಕಾಣದೆ ಮಕ್ಕಳನ್ನು ತಬ್ಬಿಕೊಳ್ಳಲು ಬಾಹುಗಳನ್ನು ಮುಂದೆ ಚಾಚಿ ಧಾವಿಸಿದನು. ಅಷ್ಟರಲ್ಲಿ ಮಕ್ಕಳು ಅರಮನೆಯನ್ನು ಬಿಟ್ಟು ರಾಜಬೀದಿಯಲ್ಲಿದ್ದರು. ಕಡೆಯ ಬಾರಿಗೆ ಮಹಾರಾಜನು ಮಕ್ಕಳನ್ನು ನೋಡಲಾಗಲಿಲ್ಲ. ಹತಾಶನಾದ ಮಹಾರಾಜನು "ಹಾ ರಾಮಾ!" ಎಂದು ಕೂಗುತ್ತ ಹೆಬ್ಬಾಗಿಲಿನ ಹೊಸಿಲನ್ನು ಎಡವಿ ಬಿದ್ದು ಎಚ್ಚರದಪ್ಪಿದನು. ಬಳಿಕ ಶೈತ್ಯೋಪಚಾರದಿಂದ ಎಚ್ಚೆತ್ತ ಅವನನ್ನು ಸಮುದ್ರಗೃಹಕ್ಕೆ ಸಾಗಿಸಿದರು. ಪತಿಯ ಕಾಲ್ದೆಸೆಯಲ್ಲಿ ಅರಸಿಯರು ಕುಳಿತರು. ಅವನು ಎಚ್ಚರವಿದ್ದಾಗ ಮಕ್ಕಳನ್ನೂ ಸೊಸೆಯನ್ನೂ ಸ್ಮರಿಸುತ್ತ ಅವರ ಹೆಸರನ್ನು ಹಿಡಿದು ಕರೆಯುತ್ತಿದ್ದನು. ಅವರ ಹೆಸರನ್ನು ಎಷ್ಟು ಉಚ್ಚರಿಸಿದರೂ ಅವರ ಗುಣವನ್ನು ಎಷ್ಟು ಹೊಗಳಿದರೂ ಅವನಿಗೆ ದಣಿವಿಲ್ಲ, ತೃಪ್ತಿಯಿಲ್ಲ. ಎಚ್ಚರದಪ್ಪಿದಾಗಲೂ ಕನವರಿಸುತ್ತ ಅವರನ್ನು ಕರೆಯುತ್ತಿದ್ದನು. ಹೀಗೆ ಎಚ್ಚರ ಮೂರ್ಛೆಗಳಲ್ಲಿ ಕಾಲ ಸರಿಯಿತು. ಪುತ್ರಶೋಕಾಗ್ನಿಯಿಂದ ಅವನ ದೇಹ ಶಿಥಿಲವಾಯಿತು. ಅವನ ಬುದ್ಧಿ ಮಂಕಾಗಿ ಉನ್ಮಾದಕ್ಕೆ ತಿರುಗಿತು. ಸರ್ವವೂ ಅವನಿಗೆ ಶೂನ್ಯವಾಗಿ ಅವನು ಮರಣೋನ್ಮುಖನಾದನು.

ಅಯೋಧ್ಯೆಯೆಲ್ಲ ದುಃಖಸಾಗರದಲ್ಲಿ ಮುಳುಗಿತು, ರಾಮನನ್ನು ಬೀಳ್ಕೊಡುವಾಗ. ಆಬಾಲವೃದ್ಧರಾದಿಯಾಗಿ ಪೌರರೆಲ್ಲರೂ ತಬ್ಬಲಿಗಳಾದೆವೆಂದು ಗೋಳಾಡಿದರು. ತರುಣೀಶಿಶುವೃದ್ಧರೆಲ್ಲ ನಿದ್ರಾಹಾರಗಳನ್ನು ತೊರೆದರು. ಕುದುರೆ, ಆನೆಗಳೂ ಕಂಬನಿದುಂಬಿದುವು. ರಾಮ ಸೀತಾ ಲಕ್ಷ್ಮಣರು ರಥವನ್ನು ಹತ್ತಿದರು.

ಮಂತ್ರಿ ಸುಮಂತ್ರನೇ ಸಾರಥಿಯಾದನು. ಕೆಲವು ಮಂದಿ ಪಟ್ಟಣಿಗರು ರೋದಿಸುತ್ತ ರಥವನ್ನು ಹಿಂಬಾಲಿಸಿದರು. ತಡಮಾಡಿದಷ್ಟೂ ತೊಂದರೆಯೆಂದು ರಾಮನು ಯೋಚಿಸಿ ಮೌನವಾಗಿ ಪ್ರಜೆಗಳನ್ನು ಬೀಳ್ಕೊಟ್ಟನು. ಸುಮಂತ್ರನು ನಿರ್ವಾಹವಿಲ್ಲದೆ ರಥವನ್ನು ಓಡಿಸಿದನು. ರಥಾಶ್ವಗಳು ದುಃಖದಿಂದ ವೇಗವಾಗಿ ಓಡದಾದುವು. ರಾಜ್ಯ ಕಳೆದು ಕಾಡು ಸಿಕ್ಕಿತು. ಶೃಂಗಿವೇರಪುರದಲ್ಲಿ ಅವರು ರಥದಿಂದ ಇಳಿದು ಸುಮಂತ್ರನನ್ನು ಬೀಳ್ಕೊಂಡರು. ಸುಮಂತ್ರನು ಭಾರವಾದ ಹೃದಯವನ್ನು ಹೊತ್ತು ದುಗುಡದಿಂದ ಅಯೋಧ್ಯೆಗೆ ಮರಳಿದನು.

ಮಕ್ಕಳು ಹೋದ ದಿಕ್ಕನ್ನೇ ನೋಡುತ್ತ ದಶರಥನು ಅತ್ತ ಹೋಗಲು ತಡವರಿಸುತ್ತ ಎದ್ದು ನಡೆಯಲಾರದೆ ಕೆಳಕ್ಕೆ ಕುಸಿದು "ಓ ರಾಮಾ, ಓ ಸೀತೆ, ಓ ಲಕ್ಷ್ಮಣಾ, ಓ—" ಎಂದು ಕೂಗಿ ಯಾರೂ ಓಗೊಡದಿರಲು ತನಗೆ ಮರುಮಾತು ಗುಡಿರೆಂದು ದೈನ್ಯದಿಂದ ಬೇಡುತ್ತಿದ್ದನು. "ಸೂರ್ಯನಂತೆ ರಾಮ ಹೋದನು, ಸೂರ್ಯನನ್ನು ಹಗಲು ಹಿಂಬಾಲಿಸುವಂತೆ ರಾಮನನ್ನು ಲಕ್ಷ್ಮಣ ಹಿಂಬಾಲಿಸಿದನು. ಸೂರ್ಯನೂ ಹಗಲೂ ಮರೆಯಾಗಲು ಅದೃಶ್ಯವಾಗುವ ನೆರಳಿನಂತೆ ಜಾನಕಿಯೂ ಮರೆಯಾದಳು" ಎಂದು ರೋದಿಸಿದನು. "ಅಯ್ಯೋ, ವಿಧಿಯು ರಾಮನನ್ನು ಬೇರೆಯವರ ಹೊಟ್ಟೆಯಲ್ಲಿ ಏಕೆ ಹುಟ್ಟಿಸಲಿಲ್ಲ ? ಈ ದುಷ್ಟ ಕೈಕೆಯನ್ನು ಏಕೆ ಹೆಣ್ಣು ಹುಲಿಯನ್ನಾಗಿ ಸೃಷ್ಟಿಸಲಿಲ್ಲ ?" ಎಂದು ನಿಷ್ಠುರನಾಗಿ ವಿಧಿಯನ್ನು ನಿಂದಿಸಿದನು.

ಶೋಕ ಹೆಚ್ಚಿದಂತೆ ಅವನ ಬುದ್ಧಿ ಶೂನ್ಯವಾಯಿತು. ಕಡೆಕಡೆಗೆ ಅವನು ತನ್ನ ಅರಸಿಯರ ಗುರುತನ್ನೂ ಹಿಡಿಯದಾದನು. ಸುಮಂತ್ರನು ಅಯೋಧ್ಯೆಗೆ ಮರಳಿದಾಗ ತನ್ನ ಮಕ್ಕಳನ್ನು ಕರೆತಂದಿದ್ದಾನೆಂದೇ ಅವನಿಗೆ ಭ್ರಾಂತಿ. "ಅಣ್ಣಾ, ನನ್ನ ಹಿರಿಯ ಮಗ ರಾಮನೆಲ್ಲಿ ? ಮೈಥಿಲಿ, ಲಕ್ಷ್ಮಣರೆಲ್ಲಿ ? ವಿಗತನಾದ ತಂದೆಗೆ ಏನು ಹೇಳಿಕಳಿಸಿದ್ದಾರೆ ?" ಎಂದು ಸುಮಂತ್ರನನ್ನು ಆಸೆಯಿಂದ ಕೇಳಿದನು.

ಶೃಂಗಿವೇರಪುರದಲ್ಲಿ ರಥದಿಂದಿಳಿದು ಶೋಕದಿಂದ ಮಾತನಾಡಲಾರದೆ ಅವರು ಅಯೋಧ್ಯೆಯ ಕಡೆಗೆ ಮುಖ ತಿರುಗಿಸಿ ಅಲ್ಲಿಂದಲೇ ಮಹಾರಾಜನಿಗೆ ನಮಸ್ಕರಿಸಿ ಕಣ್ಣೀರು ಸುರಿಸುತ್ತಾ ಮೌನದಿಂದ ಕಾಡನ್ನು ಪ್ರವೇಶಿಸಿದರೆಂದು ಸುಮಂತ್ರನು ಹೇಳಿದನು.

ಆಗ ಮಹಾರಾಜನು ಮತ್ತೆ ಮತ್ತೆ ಮೂರ್ಛಿತನಾಗಿ ಮಕ್ಕಳನ್ನು ನೆನೆದು ಹಂಬಲಿಸಿ ಮೇಲೆ ನೋಡುತ್ತಾ "ಅದೋ ಶೋಕಸಂತಪ್ತನಾದ ನನ್ನನ್ನು

ಸಂತೈಸಲು ಪಿತೃಗಳೇ ಬಂದಿದ್ದಾರೆ. ಹಾ ರಾಮಾ, ವೈದೇಹೀ, ಲಕ್ಷ್ಮಣಾ, ನಾನು ಪಿತೃಗಳೆಡೆಗೆ ಹೋಗುತ್ತೇನೆ. ಪಿತೃಗಳೇ, ಇದೋ ಬಂದೆ" ಎಂದು ಒರಲಿ ಮೂರ್ಛೆಯಲ್ಲಿ ಮುಳುಗಿದನು. ಆ ಮೂರ್ಛೆಯೇ ಅವನ ಕಟ್ಟಕಡೆಯ ಇರವಾಯಿತು.

ಪ್ರಜೆಗಳು ತಮ್ಮ ತಂದೆಯನ್ನೇ ಕಳೆದುಕೊಂಡಂತೆ ತಬ್ಬಲಿಗಳಾದೆವೆಂದು ಹಲುಬಿದರು. ಜನರನ್ನೂ ರಾಣೀವಾಸದವರನ್ನೂ ಸಂತೈಸುವವರು ಯಾರೂ ಇಲ್ಲವಾದರು. ಭರತನನ್ನು ಕರೆತರಲು ಸೂತನೊಬ್ಬನು ರಥವನ್ನು ಓಡಿಸಿದನು. ಶಾಸ್ತ್ರೋಕ್ತವಾಗಿ ದಶರಥನ ಉತ್ತರಕ್ರಿಯಾದಿಗಳೆಲ್ಲಾ ನಡೆದುವು. ಭರತನು ಅಯೋಧ್ಯೆಗೆ ಬರುವಷ್ಟರಲ್ಲಿ ಪಟ್ಟಣದ ಹೊರವಲಯದ ಪ್ರತಿಮಾಗೃಹದಲ್ಲಿ- ಗತಿಸಿದ ಇಕ್ಷ್ವಾಕು ರಾಜರ ಪ್ರತಿಮೆಗಳ ಸಾಲಿನಲ್ಲಿ; ದಶರಥನ ಪ್ರತಿಮೆಯೂ ಸ್ಥಾಪಿತವಾಗಿತ್ತು.

ಭರತನು ಈ ಸಮಯದಲ್ಲಿ ಸೋದರಮಾವನ ಮನೆಯಲ್ಲಿದ್ದನು. ಇಷ್ಟು ದಿನ ಮಾವನ ಅಕ್ಕರೆಯ ಆತಿಥ್ಯ ಅವನನ್ನು ಬಂಧಿಸಿತ್ತು. ತಾಯಿ ತಂದೆಯರ, ಸಹೋದರರ ನೆನಪು ಕಾಡಿದರೂ ಮಾವನ ಇಷ್ಟಾನುಸಾರ ಬಹಳ ದಿನ ಅಲ್ಲೇ ಇದ್ದುಬಿಟ್ಟನು.

ಅವನನ್ನು ಕರೆತರಲು ಹೋದ ಸೂತನು "ಮಹಾರಾಜನಿಗೆ ಅನಾರೋಗ್ಯ, ಕೂಡಲೆ ಹೊರಡಬೇಕು" ಎಂದಿಷ್ಟೆ ಹೇಳಿದ. ಭರತನ ಹೃದಯ ಕಳವಳಗೊಂಡಿತು. ಒಮ್ಮೆಗೇ ದುಃಖ ಉಕ್ಕಿಬಂದಿತು. ಆಗಲೇ ಅವನು ಕಾತರದಿಂದ ಅಯೋಧ್ಯೆಗೆ ಪ್ರಯಾಣ ಬೆಳೆಸಿದನು. ಇಷ್ಟು ದಿನ ಮನೆಯನ್ನು ಮರೆತಿದ್ದುದಕ್ಕೆ ಅವನಿಗೆ ಖೇದವಾಯಿತು. ರಥದ ವಾಯುವೇಗ ಅವನಿಗೆ ನಿಧಾನವಾಗಿ ಕಂಡಿತು. ಒಂದೊಂದು ಚಣವೂ ಯುಗವಾಗಿ ತೋರಿತು. ಮಾರ್ಗದ ಇಕ್ಕೆಲದ ನಿಸರ್ಗ ರಮಣೀಯತೆಯೂ, ರಥವನ್ನು ಕಂಡು ನೆಗೆದೋಡುವ ಭಯಚಕಿತ ವನ್ಯಮೃಗಗಳೂ, ವೃಕ್ಷಸಂಕುಲದ ಹಸಿರಿನಲ್ಲಿ ಇಂಚರಗೈಯುವ ಪಕ್ಷಿಸಂಕುಲವೂ ಅವನನ್ನು ಆಕರ್ಷಿಸದಾದುವು. ದಾರಿಯುದ್ದಕ್ಕೂ ಅವನಿಗೆ ತಂದೆಯ ಯೋಚನೆ.

"ತಂದೆಗೆ ರೋಗ ಯಾವುದು? ವೈದ್ಯರು ಏನು ಹೇಳುತ್ತಾರೆ? ಅನ್ನ ಉಣ್ಣುತ್ತಾನೆಯೆ? ಮಲಗುತ್ತಾನೆಯೆ? ಜೀವಕ್ಕೆ ತೊಂದರೆಯಿಲ್ಲವೆ?" ಎಂದು ಭರತನು ಸೂತನನ್ನು ಕೇಳಿದನು.

ಮೊದಲೇ ಮಹಾರಾಜನ ಮರಣವೃತ್ತಾಂತವನ್ನು ತಿಳಿಸಿ ಅವನನ್ನು ನೋಯಿ

ಕೂಪಕ್ಕೆ ತಳ್ಳದೆ ವ್ಯಂಗ್ಯಾರ್ಥಸೂಚಕವಾದ ಮಾತುಗಳಿಂದ ಸೂತನು ಉತ್ತರಿಸಿದನು.

"ಇನ್ನೂ ಎಷ್ಟು ದೂರ? ಸಿಕ್ಕಿತೆ?" ಎಂದು ಭರತನು ಪ್ರತಿ ಗಳಿಗೆಗೂ ಕೇಳುತ್ತಿದ್ದನು. ನೀರೆರೆದು ತಂಪಾಗಿರುವ ಮರಗಳನ್ನು ಕಂಡು ಅಯೋಧ್ಯೆ ಸಮೀಪಿಸಿತೆಂದು ತಿಳಿದ ಭರತನು ಉತ್ಕಂಠಿತನಾದನು. ಸ್ವಜನರನ್ನು ಕಾಣಲು ಅವನ ಎದೆ ಹಾತೊರೆಯಿತು. ಅಯೋಧ್ಯೆಯ ಹೊರವಲಯ ಸಮೀಪಿಸಿತು. ಜನ್ಮಾಂತರಗಳನ್ನು ದಾಟಿ ಬಂದಂತಾಯಿತು ಭರತನಿಗೆ. ಅವನ ಎದೆ ಹಿಗ್ಗಿತು. ಅರಮನೆಗೆ ತಾನು ಹೋದಾಗ ಏನಾಗಬಹುದೆಂಬುದನ್ನು ಅವನು ಕಲ್ಪಿಸಿಕೊಳ್ಳತೊಡಗಿದನು. ತಾನು ತಂದೆಗೆ ನಮಸ್ಕರಿಸಿದಾಗ ಅವನು ಪುತ್ರಸ್ನೇಹದಿಂದ ತನ್ನನ್ನು ಮೇಲೆತ್ತುವಂತೆಯೂ, ತನ್ನ ನಡೆನುಡಿಯನ್ನು ಕಂಡು ಲಕ್ಷ್ಮಣನು ಹಾಸ್ಯಮಾಡುವಂತೆಯೂ ಚಿತ್ರಿಸಿಕೊಂಡನು.

ಅವನ ಮುಗ್ಧತೆಯನ್ನು ಕಂಡ ಸೂತನು ಅವನಿಗೆ ಮುಂದೆ ಕವಿಯುವ ದುಃಖವನ್ನು ನೆನೆದು ತಾನು ತಿಳಿದಿದ್ದರೂ ಹೇಳುವಂತಿಲ್ಲವೆಂದು ವ್ಯಥೆಪಟ್ಟನು. "ಮಹಾರಾಜನು ಗತಿಸಿದನು, ನಿನಗೆ ಪಟ್ಟ ಕಾದಿದೆ, ಅಣ್ಣನು ವನವಾಸಕ್ಕೆ ಹೋದನು—ಎಂಬೀ ಮೂರು ಮಾತನ್ನು ಯಾರು ತಾನೆ ಹೇಳಬಲ್ಲರು" ಎಂದು ಅವನು ತನ್ನಲ್ಲೇ ಪರಿತಪಿಸಿದನು.

ಆಗ ಪಟ್ಟಣದ ಹೊರಗೆ ಕಾದಿದ್ದ ಭಟನೊಬ್ಬನು "ಪುರಪ್ರವೇಶಕ್ಕೆ ಲಗ್ನ ಸರಿಯಿಲ್ಲ, ಸ್ವಲ್ಪ ಹೊತ್ತು ಕಾಯಬೇಕೆಂದು ರಾಜಪುರೋಹಿತರು ಹೇಳಿದ್ದಾರೆ" ಎಂದು ತಿಳಿಸಿದನು.

ಭರತನ ಉತ್ಸಾಹ ಮಸುಕಾಯಿತು. ಆದರೂ ಗುರುವಚನವು ಅಲಂಘನೀಯವೆಂದು ಅತಿಕ್ರಮಿಸದೆ ವಿಶ್ರಮಿಸಿಕೊಳ್ಳಲು ರಥದಿಂದಿಳಿದನು. ಪಕ್ಕದ ಮರಗಳ ಮಧ್ಯದಲ್ಲಿದ್ದ ದೇವಾಲಯವನ್ನು ಕಂಡು ದೇವಪೂಜೆ ವಿಶ್ರಾಂತಿ ಎರಡೂ ಲಭಿಸಿದಂತಾಗುತ್ತದೆಯೆಂದುಕೊಂಡು ಸೂತನಿಗೆ ವಿಶ್ರಮಿಸಿಕೊಳ್ಳಲು ಆಜ್ಞಾಪಿಸಿ ಅವನು ಅಲ್ಲಿಗೆ ಹೋದನು.

ತೋಪಿನ ನಡುವೆ ಭರತನಿಗೆ ಕಾಣಿಸಿದ ದೇಗುಲವೆ ಪ್ರತಿಮಾಗೃಹ. ಇಕ್ಷ್ವಾಕು ಕುಲದರಸರ ಪ್ರತಿಮೆಗಳನ್ನು ಅಮೃತಶಿಲೆಯಲ್ಲಿ ಕಡೆದು ಅಲ್ಲಿ ಇಡಲಾಗಿತ್ತು. ಅಂದು ದಶರಥನ ಅರಸಿಯರು ಪ್ರತಿಮಾಗೃಹಕ್ಕೆ ಪೂಜೆಗೆ ಬರುವವರಾದುದರಿಂದ ರಾಜಭಟರು ಅದಕ್ಕೆ ಸುಣ್ಣ ಬಳಿದು ತಳಿರುತೋರಣಗಳಿಂದ ಅಲಂಕರಿಸಿದ್ದರು. ಭರತನು ಪ್ರತಿಮಾಗೃಹವನ್ನು ಪ್ರವೇಶಿಸಿ ಅಲ್ಲಿದ್ದ ಪ್ರತಿಮೆಗಳನ್ನು ನೋಡಿ

ಸಂತೋಷಪಟ್ಟು ಅವು ದೇವರ ವಿಗ್ರಹಗಳೆಂಬ ಭಾವನೆಯನ್ನುಂಟುಮಾಡಿದು ದರಿಂದ ಅವಕ್ಕೆ ನಮಸ್ಕರಿಸಲು ಹೋದನು.

ಆದರೆ ಅಲ್ಲೇ ಇದ್ದ ದೇಗುಲಿಗನು ಭರತನನ್ನು ಬ್ರಾಹ್ಮಣನೆಂದು ತಿಳಿದು "ನೀನು ಪ್ರಣಾಮ ಮಾಡಕೂಡದು, ಇವರೆಲ್ಲರೂ ಕ್ಷತ್ರಿಯರು" ಎಂದು ತಡೆದನು. ತನ್ನ ಪೂರ್ವಜರ ವಿಗ್ರಹಗಳನ್ನು ನೋಡುವ ಸುಯೋಗವು ಲಭಿಸಿತೆಂದು ಆನಂದಿಸಿ ಭರತನು ಅವರ ಪರಿಚಯ ಮಾಡಿಕೊಡಲು ಅವನನ್ನು ಕೇಳಿದನು. ಅವರವರ ಕೀರ್ತಿಯನ್ನು ಹೇಳಿ "ಇವನು ದಿಲೀಪ, ಇವನು ರಘು, ಇವನು ಅಜ" ಎಂದು ದೇಗುಲಿಗನು ಪ್ರತಿಮೆಗಳನ್ನು ತೋರಿದನು.

ಆ ಮೂವರ ಪ್ರತಿಮೆಗಳಿಗೆ ಭರತನು ನಮಸ್ಕರಿಸಿದನು. ಮುಂದಿದ್ದ ಪಿತೃ ಸದೃಶವಾದ ಪ್ರತಿಮೆಯನ್ನು ಕಂಡು ಅವನು ಖಿನ್ನನಾದನು. "ಗಾಬರಿಸುವ ಆತುರದಲ್ಲಿ ಮರೆತು ಸರಿಯಾಗಿ ತಿಳಿಯಲಾಗಲಿಲ್ಲ. ಮತ್ತೊಮ್ಮೆ ಹೇಳು. ಈ ಪ್ರಾಜ್ಞನಾರು ?" ಎಂದು ಭರತನು ಕೇಳಿದನು.

ಅವರ ಹೆಸರುಗಳನ್ನು ದೇಗುಲಿಗನು ಮತ್ತೆ ಹೇಳಿದನು. ಅಜನ ಮುಂದಿನ ಪ್ರತಿಮೆ ದಶರಥನದು. ತಂದೆ ಇನ್ನೂ ಜೀವಿಸಿರುವನೆಂದೇ ಭರತನ ನಂಬಿಕೆ. ಜೀವವಿರುವ ತಂದೆಯ ಪ್ರತಿಮೆ ಹೇಗೆ ಬಂದಿತೆಂದು ಅವನಿಗೆ ಸಂದೇಹವಾಯಿತು. ಆದ್ದರಿಂದ "ಬದುಕಿರುವವರ ಪ್ರತಿಮೆಗಳನ್ನೂ ಇಲ್ಲಿಡುವುದುಂಟೆ" ಎಂದನು. ದೇಗುಲಿಗ ಹೇಳಿದನು "ಇಲ್ಲಿ ಗತಿಸಿದವರ ಪ್ರತಿಮೆಗಳನ್ನು ಮಾತ್ರ ಇಡುವುದು."

ಯಾವುದನ್ನು ತಿಳಿಯಲು ಭರತನ ಎದೆ ತುಡಿಯುತ್ತಿತ್ತೋ ಅದನ್ನು ತಿಳಿದಾಗ ಅವನಿಗೆ ಎದೆ ಒಡೆದುಹೋದಂತಾಯಿತು. ಅಲ್ಲಿ ನಿಲ್ಲಲು ಅವನಿಗೆ ಸಾಧ್ಯ ವಾಗಲಿಲ್ಲ. ಇನ್ನು ನಿಮ್ಮನ್ನು ಬೀಳ್ಕೊಡುತ್ತೇನೆ ಎಂದು ಅಲ್ಲಿಂದ ಹೊರಟನು. "ನಿಲ್ಲು, ಯಾವನು ಸ್ತ್ರೀಶುಲ್ಕಕ್ಕೆಂದು ರಾಜ್ಯವನ್ನೂ ಬಿಟ್ಟನೋ ಅಂತಹ ದಶರಥನ ಪ್ರತಿಮೆಯನ್ನು ಏಕೆ ಕೇಳಲೊಲ್ಲೆ ?" ದೇಗುಲಿಗನು ಅವನನ್ನು ಕೇಳಿದನು.

ಆಕಸ್ಮಿಕವಾಗಿ ಅಪ್ರಾರ್ಥಿತವಾಗಿ ಹಠಾತ್ತನೆ ತಂದೆಯ ಮಾರಣವಾರ್ತೆಯನ್ನು ಕೇಳಿ ಭರತನು ಮೂರ್ಛಿತನಾಗಿ ಬಳಿಕ ಎಚ್ಚತ್ತು ಪಿತೃಶೋಕದಿಂದ ಬಿರಿಯುವ ತನ್ನ ಹೃದಯವನ್ನು ಸಂತೈಸಿಕೊಂಡು ಅಲ್ಲಿಂದ ಹೋಗುವ ದೇಗುಲಿಗನನ್ನು ನಿಲ್ಲಿಸಿ ತಾನು ಭರತನೆಂದು ತಿಳಿಸಿ ಉಳಿದ ಸಂಗತಿಯನ್ನು ಹೇಳಲು ಬೇಡಿದನು. "ಪ್ರಾಜ್ಞನಾದ ದಶರಥನು ಗತಿಸಿದನು. ಸೀತಾಲಕ್ಷ್ಮಣರೊಡನೆ ರಾಮನು ಕಾಡಿಗೆ ಹೋದನು" ದೇಗುಲಿಗನು ಹೇಳಿದನು.

ಆ ಮಾತನ್ನು ಕೇಳುತ್ತಿದ್ದಂತೆಯೇ ಮತ್ತೆ ಮತ್ತೆ ಪ್ರಜ್ಞಾಹೀನನಾಗುತ್ತಾ "ಅಯ್ಯೋ ತಂದೆಯೂ ಅಣ್ಣನೂ ಇಲ್ಲದ ಅಯೋಧ್ಯೆಗೆ ನಾನು ಬಂದುದು ಬಾಯಾರಿದವನು ಬತ್ತಿದ ತೊರೆಗೆ ಹೋದಂತಾಯಿತೆ!" ಎಂದು ಹಲುಬಿ ಅವನು ಎಲ್ಲವನ್ನೂ ವಿವರವಾಗಿ ತಿಳಿಸಲು ಕೇಳಿಕೊಂಡನು.

ದೇಗುಲಿಗನು "ಮಹಾರಾಜನು ರಾಮನಿಗೆ ಅಭಿಷೇಕ ಮಾಡಲು ಹೋದಾಗ ನಿಮ್ಮ ತಾಯಿ ಹೇಳಿದಳು" ಎಂದು ಹೇಳುತ್ತಿರುವಷ್ಟರಲ್ಲೇ "ಸಾಕು, ಸಾಕು, ತಿಳಿಯಿತು. ಮಗನಿಗೆ ಪಟ್ಟವಾಗಲಿ, ರಾಮ ಕಾಡಿಗೆ ಹೋಗಲಿ ಎಂದಳಲ್ಲವೆ! ಅಣ್ಣನ ವಲ್ಕಲ ವಸನವನ್ನು ನೋಡಿ ತಂದೆ ದುಃಖದಿಂದ ಮೃತನಾದನಲ್ಲವೆ!" ಎಂದು ಭರತನು ಮೂರ್ಛಿತನಾದನು.

ಅಷ್ಟರಲ್ಲಿ ಸುಮಂತ್ರನು ಕೌಸಲ್ಯೆ, ಸುಮಿತ್ರೆ, ಕೈಕೆಯರೊಡನೆ ದೇಗುಲಕ್ಕೆ ಬಂದನು. ನೆಲದಲ್ಲಿ ಮೈಮರೆತೊರಗಿದ್ದ ಭರತನನ್ನು ಕಂಡು ಸುಮಂತ್ರನು ಅರಸಿಯರನ್ನು ಪ್ರವೇಶಿಸಬೇಡಿಯೆಂದು ತಡೆದು ಮುಂದೆ ಬಂದನು. ಆಗ ದೇಗುಲಿಗನು ಅವನು ಭರತನೆಂದು ಅವನಿಗೆ ತಿಳಿಸಿ ಅಲ್ಲಿಂದ ಹೊರಟುಹೋದನು. ರಾಣಿಯರು ಭರತನ ಬಳಿಗೆ ಧಾವಿಸಿದರು.

ಭರತನು ಎಚ್ಚತ್ತು ತನ್ನ ಬುದ್ಧಿಯನ್ನು ಸ್ವಾಧೀನಕ್ಕೆ ತಂದುಕೊಳ್ಳುತ್ತ ಸುಮಂತ್ರನನ್ನು ಗುರುತಿಸಿ ತಾಯಿಯರಿಗೆ ಅಭಿನಂದಿಸುವ ಕ್ರಮವನ್ನು ತಿಳಿಸಲು ಕೇಳಿದನು. ಅವನು ಸುಮಂತ್ರನು ತೋರಿದ ಕೌಸಲ್ಯೆ ಸುಮಿತ್ರೆಯರಿಗೆ ನಮಸ್ಕರಿಸಿದನು. ಬಳಿಕ ತನ್ನ ತಾಯಿ ಕೈಕೆಯನ್ನು ದಿಟ್ಟಿಸಿ ರೋಷದಿಂದ ಮೇಲೆದ್ದು "ಎಲೌ ಪಾಪಾತ್ಮಳೆ, ಗಂಗೆ ಯಮುನೆಯರನ್ನು ಕುನದಿ ಸೇರುವಂತೆ ಪಾಪಿಯಾದ ನೀನು ಕೌಸಲ್ಯೆ ಸುಮಿತ್ರೆಯರನ್ನು ಕೂಡಿದರೆ ಶೋಭಿಸುವುದೆ?" ಎಂದು ನಿಷ್ಠುರ ಧ್ವನಿಯಿಂದ ಪ್ರಶ್ನಿಸಿದನು.

"ಮಗು ನಾನೇನು ಮಾಡಿದೆನಪ್ಪ?" ಕೈಕೆಯು ಸಮಾಧಾನದಿಂದಲೆ ಕೇಳಿದಳು.

"ಏನು ಮಾಡಿದ್ದೇನೆನ್ನುವೆಯ? ನಿನ್ನ ದೆಸೆಯಿಂದ ಆಗದೆ ಉಳಿದಿರುವುದು ಯಾವುದು? ಅಯ್ಯೋ ನನಗೆ ಅಪಕೀರ್ತಿ, ಸೋದರನಿಗೆ ವನವಾಸ, ತಂದೆಗೆ ಮೃತ್ಯು, ಪಟ್ಟಣಕ್ಕೆ ದುಃಖ, ಲಕ್ಷ್ಮಣನಿಗೆ ಕಡುಶೋಕ? ನಿನಗೆ? ನೀಚಳಾದ ನಿನಗೆ ನಿಂದೆಯಾಯಿತು" ಎಂದು ಜರಿದು ನುಡಿದನು.

"ಶಿಷ್ಟಾಚಾರವನ್ನೆಲ್ಲ ಪಾಲಿಸುವ ನೀನು ತಾಯನ್ನೇಕೆ ವಂದಿಸದಿರುವೆ?" ಎಂದು ಕೌಸಲ್ಯೆ ಕೇಳಲು "ಅವಳು ತಾಯಿಯೆ? ನೀನೇ ನನ್ನ ತಾಯಿ, ಇದೋ ನಿನಗೆ ನಮಸ್ಕರಿಸುತ್ತೇನೆ" ಎಂದನು.

ಕೈಕೆಯನ್ನು ತೋರಿ ಈಕೆ ನಿನ್ನ ತಾಯಿ ಎಂದ ಕೌಸಲ್ಯೆಯ ಮಾತಿಗೆ ಕಿವಿಗೊಡದೆ "ತಂದೆಯಾದವನು ಕುಪುತ್ರನನ್ನು ತೊರೆಯುತ್ತಾನೆ. ಈಗ ನಾನು ಹೊಸ ಧರ್ಮವನ್ನು ಹೇಳುತ್ತೇನೆ. ಪತಿಘಾತಕಿಯಾದ ತಾಯಿ ತಾಯಿಯಲ್ಲ" ಎಂದನು.

"ಮಹಾರಾಜನ ಸತ್ಯವಚನವನ್ನು ರಕ್ಷಿಸಲು ನನ್ನ ಮಗ ರಾಜನಾಗಲಿ ಎಂದೆ" ಎಂದು ಕೈಕೆ ಹೇಳಿದಳು.

"ಹಾನು ನಾನು ಮಾತ್ರ ನಿನ್ನ ಮಗ. ಅಣ್ಣ ಮಗನಲ್ಲವೆ? ಅಣ್ಣ ಪಿತೃ ಸಮಾನನಲ್ಲವೆ?" ಎಂದನು.

"ಶುಲ್ಕದಿಂದ ಬದ್ಧಳಾದವಳನ್ನು ಕೇಳಬೇಕಾಗಿದೆಯೆ?" ಎಂದು ಕೈಕೆ ಹೇಳಲು, "ಅಣ್ಣ ನಾರುಡೆಯುಟ್ಟು ಕಾಡಿಗೆ ಹೋಗಬೇಕೆಂದು ನಿನ್ನ ಕನ್ಯಾಶುಲ್ಕ ವಿಧಿಸಿತ್ತೆ?" ಎಂದು ಪ್ರಶ್ನಿಸಿದನು.

ಅದಕ್ಕೆ ಕೈಕೆಯ ಉತ್ತರ "ಮಗು, ತಕ್ಕ ಕಾಲ ದೇಶಗಳಲ್ಲಿ ಇದನ್ನು ತಿಳಿಸುತ್ತೇನೆ" ಎಂದು.

ಆದರೂ ಭರತನ ಕೋಪ ಶಮನವಾಗಲಿಲ್ಲ. "ನಿನಗೆ ರಾಜ್ಯದ ಆಸೆ ಇದ್ದರೆ ಅಣ್ಣ ಕೊಡುತ್ತಿರಲಿಲ್ಲವೆ? ಅಯ್ಯೋ ಎಂಥ ಕೆಟ್ಟ ಕೆಲಸ ಮಾಡಿದೆ. ನೀನು ರಾಜ್ಯಲುಬ್ಧೆ. ಸೀತೆ ನಾರುಮಡಿಯುಟ್ಟಾಗಲೂ ನಿನ್ನ ಕಲ್ಲೆದೆ ಕರಗಲಿಲ್ಲವೆ!" ಎಂದು ಧಿಕ್ಕರಿಸಿದನು.

ಅಷ್ಟರಲ್ಲಿ ವಸಿಷ್ಠ, ವಾಮದೇವರು ಪ್ರಜೆಗಳೊಡನೆ ಅಭಿಷೇಕ ಜಲವನ್ನು ತೆಗೆದುಕೊಂಡು ಅಲ್ಲಿಗೆ ಬಂದರು. ಸುಮಂತ್ರನು ಭರತನನ್ನು ಕುರಿತು ರಾಜಗುರುಗಳು ನಿನಗೆ ಅಭಿಷೇಕಮಾಡಲು ಬಂದಿದ್ದಾರೆಂದನು.

"ಅಭಿಷೇಕವನ್ನು ಇಲ್ಲಿರುವ ಪೂಜ್ಯಳಿಗೆ ಮಾಡಿ" ಎಂದು ಕೈಕೆಯನ್ನು ತೋರಿ "ಅಣ್ಣನ ಬಳಿಗೆ ನಾನು ಹೋಗುತ್ತೇನೆ, ಎಲ್ಲಿ ಅಣ್ಣನಿರುವನೊ ಅದೇ ನನಗೆ ಅಯೋಧ್ಯೆ, ಪ್ರಜೆಗಳು ನನ್ನ ಹಿಂದೆ ಬರಲಿ" ಎಂದು ಹೇಳಿ ಅಲ್ಲಿಂದ ಹಾಗೆಯೇ ಕಾಡಿಗೆ ಹೊರಟುಬಿಟ್ಟನು. ಸುಮಂತ್ರ ಪುರೋಹಿತರೇ ಮೊದಲಾದವರು ಅವನನ್ನು ಹಿಂಬಾಲಿಸಿದರು. ರಾಣಿಯರು ದುಗುಡದಿಂದ ಅರಮನೆಗೆ ಹಿಂದಿರುಗಿದರು.

ಕೈಕೆಯ ದುಃಖ ಕಲ್ಪನಾತೀತವಾಯಿತು. ಹೆತ್ತ ಮಗನೇ ಹಾಗೆಂದ ಮೇಲೆ ಉಳಿದವರನ್ನು ಕೇಳಬೇಕೆ! ಲಜ್ಜೆ ಶೋಕಗಳಿಂದ ಅವಳು ಯಾರಿಗೂ ಮುಖ ತೋರದಾದಳು. ಅವಳಾಯಿತು, ಅವಳ ಕತ್ತಲೆ ಕೋಣೆಯಾಯಿತು. ಅವಳ

ಶೋಕದಲ್ಲಿ ಭಾಗಿಯಾಗಲು ಮತ್ತು ಸಂತೈಸಲು ಎಳವೆಯಿಂದಲೂ ಜೊತೆಗಿದ್ದ ಅವಳ ದಾಸಿ ಮಂಥರೆಯಿದ್ದಳು. ಆ ಕತ್ತಲೆ ಕೋಣೆಯಲ್ಲಿ ಕೈಕೆ ಹರಿಸಿದ ಕಣ್ಣೀರಿನ ಕೋಡಿಗೆ ಮಿತಿಯಿದೆಯೆ! ವಸಿಷ್ಠರಿಟ್ಟ ಬೀಜ ಹೀಗೆ ಮೊಳೆತು ದಾಂಗುಡಿಯಿಟ್ಟಿತು.

ಎಲ್ಲಿಯೂ ತಂಗದೆ ಪ್ರಯಾಣ ಮಾಡಿ ರಾಮಾಶ್ರಮದ ಬಳಿಗೆ ಭರತನು ಹೋದನು. ರಾಜ್ಯಲುಬ್ಧೆಯಾದ ತನ್ನ ತಾಯಿಗೆ ಒಳ್ಳೆಯದನ್ನು ಮಾಡಲು ರಾಜ್ಯಲಕ್ಷ್ಮಿಯನ್ನು ತೊರೆದ ತನ್ನ ಪರದೈವನಾದ ಅಣ್ಣನನ್ನು ಭರತನು ನೋಡಲು ತವಕಗೊಂಡನು.

ಅವನು ರಥದಿಂದಿಳಿದು "ರಾಜ್ಯಲುಬ್ಧೆಯಾದ ಕೈಕೆಯ ಮಗ ಬಂದಿರುವನೆಂದು ರಾಮನಿಗೆ ತಿಳಿಸು" ಎಂದು ಸುಮಂತ್ರನಿಗೆ ಹೇಳಿದನು.

ಸುಮಂತ್ರನು "ಗುರುಜನರ ನಿಂದೆಯನ್ನಾಡುವುದು ಬೇಡ" ಎಂದನು.

"ಹಾಗಾದರೆ ಇಕ್ಷ್ವಾಕು ವಂಶಕ್ಕೇ ಕಳಂಕಪ್ರಾಯನಾಗಿರುವ ಭರತನು ಬಂದಿರುವನೆಂದು ತಿಳಿಸು" ಎಂದನು.

"ಹೀಗೆ ಹೇಳಲಾರೆ. ಸುಮ್ಮನೆ ಭರತನು ಬಂದಿರುವನೆಂದು ತಿಳಿಸಲೇ?" ಸುಮಂತ್ರನು ಕೇಳಿದನು.

"ಬೇಡ ಬೇಡ. ಸುಮ್ಮನೆ ಹೆಸರನ್ನು ಹೇಳಿಕೊಂಡರೆ ಪ್ರಾಯಶ್ಚಿತ್ತ ಮಾಡಿಕೊಂಡಂತಾಗುವುದಿಲ್ಲ. ಆದ್ದರಿಂದ ನೀನು ಸುಮ್ಮನಿರು. ನಾನೇ ಹೇಳುತ್ತೇನೆ. ನಿರ್ಘೃಣನೂ, ಕೃತಘ್ನನೂ, ಪ್ರಾಕೃತನೂ; ಆದರೆ ರಾಮ ಭಕ್ತನೂ ಆದ ನಾನು ಭರತ ಬಂದಿದ್ದೇನೆ. ಇರಬೇಕೊ ಅಥವಾ ಹೋಗಬೇಕೊ ಹೇಳಿ" ಎಂದು ಕೂಗಿ ಕೇಳಿದನು.

ಪಿತೃಸದೃಶವಾದ ಸ್ವರವನ್ನು ಕೇಳಿ ಯಾರೋ ತಮ್ಮ ಕಡು ನೆಂಟರೇ ಬಂದಿರಬೇಕೆಂದು ರಾಮ ಲಕ್ಷ್ಮಣರು ಊಹಿಸಿದರು. ಆಶ್ರಮದಿಂದ ಯಾರಾದರೂ ಬರುವಷ್ಟರಲ್ಲಿ ಭರತನಿಗೆ ಸಂದೇಹ, ಕಳವಳ. "ಏನು, ಕೈಕೆಯ ಮಗ ಭರತನು ಬಂದನೆಂದು ತಿಳಿಯಿತೆ?" ಎಂದು ಕೊರಗತೊಡಗಿದನು.

ಅಷ್ಟರಲ್ಲಿ ರಾಮನ ಮಾತಿನಂತೆ ಲಕ್ಷ್ಮಣನು ಆಶ್ರಮದಿಂದ ಹೊರಗೆ ಬಂದನು. ರಾಮನನ್ನು ಹೋಲುವ ಭರತನನ್ನು ಕಂಡು ಅವನು ಯಾರಿರಬಹುದೆಂದು ಅನುಮಾನಿಸಿ ಸುಮಂತ್ರನನ್ನು ಗುರುತಿಸಿ ಅಪ್ಪಾ ಎಂದು ಕೂಗಿಕೊಂಡನು. ಲಕ್ಷ್ಮಣನಿಗೆ ಭರತನು ನಮಸ್ಕರಿಸಿದನು. ಸುಮಂತ್ರನು ಲಕ್ಷ್ಮಣನಿಗೆ ಇವನು ಭರತನೆಂದು ಹೇಳಿದನು. ಲಕ್ಷ್ಮಣನು ನೀನು ರಘುವೀರನಂತೆ ಗುಣವಂತ

ನಾಗೆಂದು ಅವನನ್ನು ಆಶೀರ್ವದಿಸಿ ರಾಮನ ಬಳಿಗೆ ಹೋಗಿ ಭರತನ ಆಗಮನ ವನ್ನರುಹಿದನು.

ರಾಮನಿಗೆ ಅತ್ಯಂತ ಸಂತೋಷವಾಗಿ ಸೀತೆಯನ್ನು ಕುರಿತು "ಭರತನನ್ನು ನೋಡಲು ಕಣ್ಣುಗಳನ್ನು ಅರಳಿಸಿಕೊ" ಎಂದು ಹೇಳಿ ಭರತನನ್ನು ಕರೆತರಲು ಅವಳನ್ನೇ ಕಳುಹಿಸಿದನು. ನಮಸ್ಕರಿಸಿದ ಭರತನನ್ನು ಆಶೀರ್ವದಿಸಿ ಸೀತೆಯು ಅವನನ್ನು ಆಶ್ರಮಕ್ಕೆ ಕರೆದೊಯ್ದಳು. ರಾಮನಿಗೆ ಭರತನು ನಮಸ್ಕರಿಸಿದನು. ತಮ್ಮನನ್ನು ರಾಮನು ಬಾಚಿ ತಬ್ಬಿಕೊಂಡು ತಂದೆಯನ್ನು ಕಳೆದುಕೊಂಡ ಅವನನ್ನು ನೋಡಿ ದುಃಖದಿಂದ ಕಂಬನಿಗರೆದನು. ಸುಮಂತ್ರನಿಗೂ ದುಃಖ ವನ್ನು ತಡೆಯಲಾಗಲಿಲ್ಲ.

ಸೀತೆಯು ಸುಮಂತ್ರನಿಗೆ "ಅಪ್ಪಾ, ಶೋಕಿಸುತ್ತಿರುವ ಆರ್ಯಪುತ್ರನನ್ನು ಮತ್ತೂ ಅಳಿಸುವುದೆ" ಎಂದಳು. ರಾಮನು ಸಮಾಧಾನ ಮಾಡಿಕೊಂಡನು. ರಾಮನಿಗೆ ಮುಖ ತೊಳೆಯಲು ಭರತನೇ ನೀರನ್ನು ತೆಗೆದುಕೊಂಡು ಹೋಗಿ ಕೊಟ್ಟನು. ಅಣ್ಣನನ್ನು ಸೇವಿಸುವ ಭಾಗ್ಯ ತನಗಿಲ್ಲವಾಯಿತೆ ಎಂದು ಅವನು ಮರುಗಿದನು. ಅಭಿಷೇಕಜಲ ಎಲ್ಲಿ ಉಪಯುಕ್ತವಾಗಬೇಕೆಂದು ಸುಮಂತ್ರನು ಕೇಳಲು ರಾಮನು "ಎಲ್ಲಿ ನನ್ನ ತಾಯಿ ಉಪಯುಕ್ತವಾಗಲೆಂದು ಹೇಳಿರುವಳೊ ಅಲ್ಲಿಯೇ ಆಗಲಿ" ಎಂದನು.

ಆದರೆ ಭರತನು ಒಪ್ಪಲಿಲ್ಲ. "ಅಣ್ಣ, ದಯೆಗೈಯಬೇಕು. ಗಾಯದ ಮೇಲೆಯೇ ಹೊಡೆಯಬಾರದು. ನಿನಗೆ ತಂದೆಯಾದವನು ನನಗೂ ತಂದೆ. ತಾಯಿಯ ದೋಷ ಮಗನಿಗೆ ತಟ್ಟುವುದಿಲ್ಲ. ದುಃಖ ಸಂತಪ್ತನಾದ ನನ್ನ ಮೇಲೆ ದಯೆ ದೋರು" ಎಂದು ಅಂಗಲಾಚಿದನು, ಕೇಳುವವರಿಗೆ ಕರುಣೆ ಹುಟ್ಟುವಂತೆ.

ರಾಮನು ತಂದೆಯು ವಚನಭ್ರಷ್ಟನಾಗುವಂತೆ ಮಾಡಬಾರದೆನ್ನಲು ಭರತನು "ಎಲ್ಲಿಯವರೆಗೆ ನಿನ್ನ ವ್ರತವಿರುವುದೊ ಅಲ್ಲಿಯ ತನಕ ನಿನ್ನ ಪಾದಪಿಡೆಯಲ್ಲಿ ನಾನೂ ಇರುವೆನು" ಎಂದನು, ದೈನ್ಯದಿಂದ. ಎಷ್ಟು ಮಾತ್ರಕ್ಕೂ ಭರತನು ಒಪ್ಪದಿರಲು ರಾಮನು ತನ್ನ ಮೇಲೆಯೇ ಆಣೆಯಿಟ್ಟನು.

ಎಂತಾದರೂ ಅಣ್ಣನನ್ನು ಅಯೋಧ್ಯೆಗೆ ಕರೆದೊಯ್ಯುವುದು ಆಗದ ಮಾತು. ಇನ್ನು ಅಣ್ಣನ ಮಾತನ್ನು ಮೀರುವಂತಿಲ್ಲ. ಯಾವ ರಾಜ್ಯದ ದೆಸೆಯಿಂದ ಇಷ್ಟೆಲ್ಲ ಹಗರಣವಾಯಿತೊ ಅದನ್ನು ಭರತನು ಭೋಗಿಸಲಾರನು. ಹದಿನಾಲ್ಕು ವರ್ಷಗಳಾದ ಮೇಲೆ ತನ್ನಲ್ಲಿ ನ್ಯಾಸವಿಟ್ಟ ರಾಜ್ಯವನ್ನು ರಾಮನೇ ತೆಗೆದುಕೊಳ್ಳ ಬೇಕೆಂದು ಅವನು ಒಂದು ನಿಬಂಧನೆಯನ್ನೊಡ್ಡಿದನು. ಅದಕ್ಕೆ ರಾಮನೂ

ಒಪ್ಪಿಕೊಂಡನು. ಎರಡನೆಯದಾಗಿ ರಾಮನು ತನ್ನ ಪಾದುಕೆಗಳನ್ನು ಕೊಡಬೇಕೆಂದೂ, ಅವಕ್ಕೆ ವಿಧೇಯನಾಗಿ ತಾನು ಅವನ ಪ್ರತಿನಿಧಿಯಂತೆ ರಾಜ್ಯವಾಳುವುದಾಗಿಯೂ ಹೇಳಿ ಅಣ್ಣನ ಕಾಲುಗಳನ್ನು ಭರತನು ಹಿಡಿದುಕೊಂಡನು.

ರಾಮನು ಪಾದುಕೆಗಳನ್ನು ಕೊಟ್ಟು ಭರತನಿಗೆ ಬೇಕಾದುದೆಲ್ಲವನ್ನು ನಡೆಸಿಕೊಡುವಂತೆ ಸುಮಂತ್ರನಿಗೆ ಹೇಳಿದನು. ಬಳಿಕ "ವತ್ಸ, ರಾಜ್ಯವನ್ನು ಒಂದು ಮುಹೂರ್ತ ಕಾಲ ಕೂಡ ಉಪೇಕ್ಷಿಸತಕ್ಕದಲ್ಲ. ಆದ್ದರಿಂದ ಇಂದೇ ನೀನು ಹಿಂದಿರುಗು" ಎಂದು ಭರತನಿಗೆ ಹೋಗಲು ಅಪ್ಪಣೆಕೊಟ್ಟನು.

"ಅಪ್ಪಾ, ಮಹಾರಾಜನಂತೆಯೇ ಕುಮಾರನನ್ನು ಕಾಪಾಡು" ಎಂದು ಸುಮಂತ್ರನಿಗೆ ಹೇಳಿ ಅವರನ್ನು ರಥ ಹತ್ತಿಸಿ ಆಶ್ರಮದ ಬಾಗಿಲವರೆಗೆ ಸೀತಾಲಕ್ಷ್ಮಣರೊಡನೆ ರಾಮನು ಹೋಗಿ ಬೀಳ್ಕೊಟ್ಟನು.

ಭರತನು ರಾಮನ ಪಾದುಕೆಗಳಿಗೆ ಅಭಿಷೇಕಮಾಡಿ ಅಯೋಧ್ಯೆಯಲ್ಲಿ ಪ್ರತಿನಿಧಿಯಂತೆ ರಾಜ್ಯನಾಳುತ್ತಿದ್ದನು. ಕಾರ್ಯವಶದಿಂದ ಅವನ ದೇಹ ಪುರದಲ್ಲಿದ್ದರೂ ಅವನ ಆತ್ಮ ರಾಮನ ಬಳಿಯಲ್ಲಿಯೆ ಸುಳಿದಾಡುತ್ತಿತ್ತು. ಅರಮನೆಯಲ್ಲಿದ್ದರೂ ಅಣ್ಣನಂತೆ ತಾನು ನಾರುಡೆಯುಟ್ಟು ಭೋಗಭಾಗ್ಯಾದಿಗಳನ್ನು ತೊರೆದಿದ್ದನು. ಗಳಿಗೆ ಗಳಿಗೆಗೂ ಅತ್ತಿಗೆ ಅಣ್ಣಂದಿರು ಕಾಡಿನಲ್ಲಿ ಎಷ್ಟು ಕಷ್ಟಪಡುವರೋ ಎಂದು ಅವನ ಎದೆ ತುಡಿಯುತ್ತಿತ್ತು.

ಆಗಾಗ್ಗೆ ಭರತನು ಸುಮಂತ್ರನನ್ನು ಜನಸ್ಥಾನಕ್ಕೆ ಕಳುಹಿಸಿ ಅವರ ಯೋಗಕ್ಷೇಮವನ್ನು ತಿಳಿದುಕೊಳ್ಳುತ್ತಿದ್ದನು. ಸುಮಂತ್ರನು ಬರುವುದು ತಡವಾದರೆ ಏನಾಯಿತೂ ಎಂಬ ಕಾತರ. ಅಯೋಧ್ಯೆಯಿಂದ ಜನಸ್ಥಾನಕ್ಕೆ, ಜನಸ್ಥಾನದಿಂದ ಅಯೋಧ್ಯೆಗೆ, ಹೋಗಿ ಬರುವುದೇ ಸುಮಂತ್ರನ ಕೆಲಸವಾಗಿತ್ತು.

ಭರತನು ತಾಯಿಯ ಮುಖವನ್ನು ನೋಡದಾದನು. ಕೈಕೆ ಅಜ್ಞಾತಳಾಗಿ ದಿನ ನೂಕುತ್ತಿದ್ದಳು. ಆದರೂ ಮುಂದೆ ಸತ್ಯ ಪ್ರಕಟವಾಗಿ ತನ್ನ ಮೇಲಿನ ಅಪವಾದ ಹರಿಯಬಹುದಾದ ದಿನ ಬರುವುದೆಂಬ ಆಸೆಯಿಂದ ಅವಳು ಜೀವ ಹಿಡಿದಿದ್ದಳು. ಆ ದಿನಗಳು ಅವಳ ಬಾಳಿನಲ್ಲಿ ಮಹಾ ದುರ್ದಿನಗಳು. 'ಪಾಪಿ, ರಾಜ್ಯಲುಬ್ಧೆ' ಎಂಬ ಕಟೂಕ್ತಿಗಳು ಅವಳ ಹೃದಯವನ್ನು ಕೊರೆಯುತ್ತಿದ್ದುವು. 'ವಂಶಕ್ಕೆ ಕಲಶಪ್ರಾಯರಾದ ಮಗ ಸೊಸೆಯರನ್ನು ಕಾಡಿಗಟ್ಟಿದೆ, ಇತ್ತ ಹೆತ್ತ ಮಗನೂ ಹಗೆಯಾದನು' ಎಂದು ಅವಳು ಶೋಕಿಸಿರುದೆಷ್ಟೊ! ನಿಟ್ಟುಸಿರಿಟ್ಟುದೆಷ್ಟೊ! ಅದು ಅವಳ ಅಂತರಾತ್ಮನಿಗಲ್ಲದೆ ಮತ್ತಾರಿಗೂ ತಿಳಿಯುವಂತಿರಲಿಲ್ಲ.

ಸೀತಾರಾಮಲಕ್ಷ್ಮಣರು ಜನಸ್ಥಾನದಲ್ಲಿ ಆಶ್ರಮವನ್ನು ಕಟ್ಟಿಕೊಂಡು ಕೆಲವು ತಿಂಗಳುಗಳನ್ನು ಕಳೆದರು. ವನವಾಸ ಅವರಿಗೆ ಒಗ್ಗಿತು. ಅವರ ಕಷ್ಟ ಸುಖಕ್ಕೆ ಅಲ್ಲಿ ತಾಪಸರಿದ್ದರು. ಅವರ ಸತ್ಸಹವಾಸದಲ್ಲಿ, ವನದ ಆ ಪ್ರಶಾಂತ ವಾತಾವರಣದಲ್ಲಿ, ದಿನಗಳುರುಳುವುದು ಅವರಿಗೆ ಗೊತ್ತಾಗಲಿಲ್ಲ. ಆಶ್ರಮದ ಸುತ್ತ ಬೇಲಿ ಹಾಕಿ ಒಳಗಡೆ ಹೂಗಿಡಗಳನ್ನು ನೆಟ್ಟಿದ್ದರು. ಅವಕ್ಕೆ ಸೀತೆಯು ನೀರೆರೆಯುತ್ತಿದ್ದಳು. ಲಕ್ಷ್ಮಣನ ಕೆಲಸ ಪಾತಿ ಕಟ್ಟುವುದು : ಅಗೆಯುವುದು. ಆದರೆ ರಾಮನಾದರೋ ಭರತನ ಮೇಲೆ ಸಮಸ್ತ ರಾಜ್ಯಭಾರವೂ ಬಿದ್ದಿತೆಂದು ದಿನವೂ ಚಿಂತಿಸುತ್ತಿದ್ದನು.

ಹೀಗಿರಲು ಅವರು ವನವಾಸದಲ್ಲಿದ್ದಾಗ ದಶರಥನ ಶ್ರಾದ್ಧ ದಿನವು ಬಂದಿತು. ಸ್ವರ್ಗಸ್ಥನಾದ ತಂದೆಯ ಮನಸ್ಸೊಪ್ಪುವಂತೆ, ಶ್ರಾದ್ಧ ಕಲ್ಪದಲ್ಲಿ ಹೇಳಿರುವಂತೆ. ಶಾಸ್ತ್ರೋಕ್ತವಾಗಿ ಶ್ರಾದ್ಧ ಮಾಡಬೇಕೆಂದು ರಾಮನ ಆಸೆ. ಹಾಗೆ ಮಾಡಲು ಕಾಡಿನಲ್ಲಿ ಅನುಕೂಲವಿರಲಿಲ್ಲ. ಹೂವು, ಹಣ್ಣು, ಗೆಡ್ಡೆ, ಗೆಣಸುಗಳನ್ನು ಬಿಟ್ಟರೆ ಬೇರೆ ಸಾಮಗ್ರಿ ದೊರೆಯಲಾರವು. ಶಾಸ್ತ್ರೋಕ್ತವಾಗಿ ಶ್ರಾದ್ಧವನ್ನು ಮಾಡಲು ಸಾಧ್ಯವಿಲ್ಲವಲ್ಲ ಎಂದು ಚಿಂತಿಸುತ್ತ ರಾಮನು ಹೂ ಗಿಡಗಳಿಗೆ ನೀರೆರೆಯುತ್ತಿದ್ದ ಸೀತೆಯ ಬಳಿಗೆ ಹೋದನು.

ಶೂನ್ಯಮನಸ್ಕನಾದ ಅವನ ಮುಖಭಾವವನ್ನು ನೋಡಿ ಸೀತೆಯು ಅವನ ಸಂತಾಪಕ್ಕೆ ಕಾರಣವನ್ನು ಕೇಳಲು ಅವನು "ನಾಳೆ ತಂದೆಯ ವರ್ಷಾಬ್ದಿಕ ಶ್ರಾದ್ಧವನ್ನು ಮಾಡಬೇಕು. ಕಲ್ಪದಲ್ಲಿ ಹೇಳಿರುವ ರೀತಿಯಲ್ಲೇ ಪಿಂಡವನ್ನಿಡಬೇಕೆಂದು ಪಿತೃಗಳು ಬಯಸುತ್ತಾರೆ. ಅದನ್ನು ಹೇಗೆ ನೆರವೇರಿಸಬೇಕೆಂದು ಚಿಂತಿಸುತ್ತಿದ್ದೇನೆ. ತಂದೆಯ, ನನ್ನ ಯೋಗ್ಯತೆಗೆ ತಕ್ಕಂತೆ ಮಾಡಲು ಬಯಸುತ್ತೇನೆ" ಎಂದನು.

"ಆರ್ಯಪುತ್ರ, ಅಲ್ಲಿ ಭರತನು ಶ್ರಾದ್ಧವನ್ನು ಸಮೃದ್ಧವಾಗಿ ನೆರವೇರಿಸುತ್ತಾನೆ. ಇಲ್ಲಿ ನಮ್ಮ ಅನುಕೂಲಾನುಸಾರ ಫಲೋದಕದಿಂದ ಆಚರಿಸಿದರೆ ಸಾಕಲ್ಲವೆ ? ಅದರಿಂದ ಮಾವನಿಗೂ ತೃಪ್ತಿಯಾಗುತ್ತದೆ" ಎಂದಳು.

ಆದರೂ ಸಮಾಧಾನವಾಗದೆ ರಾಮನು "ನಮ್ಮೀ ಅವಸ್ಥೆಯನ್ನು ನೋಡಿ ತಂದೆ ಅಲ್ಲಿ ದುಃಖಿಸುತ್ತಾನಲ್ಲವೆ" ಎಂದು ಚಿಂತಿಸುತ್ತಿದ್ದನು.
ವಿಧಿ ತನ್ನ ಬಲೆಯನ್ನು ಬೀಸಿ ಸಂಚಿಸತೊಡಗಿತು. ರಾಮನ ಮನಸ್ಸು ಮಾಯಾವಶವಾಗುತ್ತಿತ್ತು.

ಸೀತೆಯ ರೂಪು ಲಾವಣ್ಯಗಳನ್ನು ಕೇಳಿ ಮರುಳಾದ ಲಂಕಾಧಿಪತಿ ರಾವಣನು ಹೇಗಾದರೂ ಅವಳನ್ನು ಪಡೆಯಬೇಕೆಂದು ಹೊಂಚುಹಾಕುತ್ತಿದ್ದನು. ಶ್ರಾದ್ಧವನ್ನೇ ಕುರಿತು ಅನನ್ಯಮನಸ್ಕನಾಗಿದ್ದ ರಾಮನನ್ನು ವಂಚಿಸಲು ಇದೇ ಸುಸಮಯವೆಂದುಕೊಂಡು ಅವನು ಕಪಟ ಮುನಿವೇಷವನ್ನು ತಾಳಿ ರಾಮನ ಬಳಿಗೆ ಹೋಗಿ ತಾನು ಅತಿಥಿಯೆಂದು ಹೇಳಿದನು. ರಾಮನು ಆ ಅಪೂರ್ವ ಸನ್ಯಾಸಿಯನ್ನು ಕಂಡು ನಮಸ್ಕರಿಸಿ, ಸ್ವಾಗತಿಸಿ ಕೂರಿಸಿ, ಸೀತೆಗೆ ಪಾದ್ಯವನ್ನು ತಂದು ಅತಿಥಿಯ ಶುಶ್ರೂಷೆ ಮಾಡಲು ಹೇಳಿದನು.

ಸೀತೆ ಕಾಲು ತೊಳೆಯಲು ನೀರನ್ನು ತೆಗೆದುಕೊಂಡು ಬಂದಳು. ಪ್ರಪಂಚದ ಸ್ತ್ರೀಸಮೂಹದಲ್ಲಿ ಸೀತೆಯು ಅರುಂಧತಿಯಂತಿದ್ದಾಳೆಂದು ರಾವಣನು ತನ್ನಲ್ಲೇ ಹೊಗಳಿದನು. ಅವಳು ಹತ್ತಿರ ಬಂದರೆ ಎಲ್ಲಿ ತನ್ನ ಮಾಯೆಯು ಬಯಲಾಗುವುದೋ ಎಂದು ಅವನು ಹೆದರಿದನು.

ಆಗ ರಾಮನೇ ಅವನ ಪಾದಗಳನ್ನು ತೊಳೆಯಲು ನೀರನ್ನು ತೆಗೆದುಕೊಂಡನು. "ಈಗಾಗಲೇ ಬೇಕಾದಷ್ಟು ಸತ್ಕಾರವಾಯಿತು" ಎಂದು ಆ ಕಪಟ ಮುನಿಯು ರಾಮನನ್ನು ಕೂತುಕೊಳ್ಳುವುದಕ್ಕೆ ಹೇಳಿ ತಾನು ವೇದ ಶಾಸ್ತ್ರಗಳಲ್ಲಿ ಮಾತ್ರವಲ್ಲದೆ ಪ್ರಚೇತಸನ ಶ್ರಾದ್ಧ ಕಲ್ಪದಲ್ಲಿಯೂ ಪಾರಂಗತನೆಂದು ಹೇಳಿಕೊಂಡನು.

ಶ್ರಾದ್ಧ ಕಲ್ಪದ ಮಾತೆತ್ತಿದ ಕೂಡಲೆ ರಾಮನ ಕಿವಿ ನೆಟ್ಟಗಾಯಿತು. ಯಾವುದನ್ನು ಅರ್ಪಿಸಿದರೆ ಪಿತೃಗಳಿಗೆ ತೃಪ್ತಿಯಾಗುವುದೆಂದೂ ಶ್ರಾದ್ಧಕ್ಕೆ ಯಾವ ವಿಶಿಷ್ಟ ಪದಾರ್ಥಗಳು ಬೇಕೆಂದೂ ಅವನನ್ನು ಆಸಕ್ತಿಯಿಂದ ಕೇಳಿದನು. ಅದಕ್ಕೆ ಬೇಕಾದ ದರ್ಭೆ, ಎಳ್ಳು, ಕೆಸವು ಮೊದಲಾದುವನ್ನು ಕಪಟ ಯತಿಯು ಹೇಳಿ 'ಕಾಂಚನ ಪಾರ್ಶ್ವಮೃಗ' ಉತ್ತಮವಾದುದೆಂದೂ ಅದು ಹಿಮವತ್ಪರ್ವತದ ಏಳನೆಯ ಶಿಖರದಲ್ಲಿ ಇರುವುದೆಂದೂ ಅದನು ಹೆಚ್ಚಿನ ಪ್ರಭಾವದಿಂದ ಮಾತ್ರ ಸಂಪಾದಿಸಲು ಸಾಧ್ಯವೆಂದೂ ತಿಳಿಸಿದನು.

ರಾಮನು ವಿಶಿಷ್ಟವೂ ಅಪೂರ್ವವೂ ಆದ ಆ ಮೃಗವನ್ನೇ ತರಲು ಹಿಮವತ್ಪರ್ವತಕ್ಕೆ ಸೀತೆಯೊಡನೆ ಹೋಗಲು ಆಗಲೇ ಹೊರಟು ನಿಂತನು. ರಾವಣನು ಅವು ಮನುಷ್ಯರಿಗೆ ಕಾಣುವುದಿಲ್ಲವೆಂದನು. ಆದರೂ ರಾಮನು ಹಿಮವಂತನು ತನ್ನನ್ನು ಕಂಡರೆ ಅವನೇ ತೋರುವನೆಂದನು.

ರಾವಣನ ಆಸೆ ಮುರಿಯಿತು. ಆದುದರಿಂದ ಆ ಮೃಗವನ್ನು ತನ್ನ ಆಸುರೀ ಶಕ್ತಿಯಿಂದ ಅಲ್ಲಿ ಸುಳಿಯುವಂತೆ ಮಾಡಿ ಹಿಮವಂತನೇ ಅದನ್ನು ಕಳುಹಿಸಿ ರಾಮನನ್ನು ಸನ್ಮಾನಿಸಿರುವನೆಂದು ಹೊಗಳಿದನು.

ರಾಮನು ಅದು ಬಂದುದು ತನ್ನ ತಂದೆಯ ಭಾಗ್ಯವೆಂದುಕೊಂಡು ಅದನ್ನು ತರಲು ಲಕ್ಷ್ಮಣನಿಗೆ ಹೇಳುವಂತೆ ಸೀತೆಗೆ ಹೇಳಿದನು. ಆದರೆ ತೀರ್ಥಯಾತ್ರೆಯಿಂದ ಮರಳಿದ ಕುಲಪತಿಗಳನ್ನು ಸ್ವಾಗತಿಸಲು ಲಕ್ಷ್ಮಣನು ಆಶ್ರಮದ ಹೊರಗೆ ಹೋಗಿದ್ದನು.

ಆದ್ದರಿಂದ ಆ ಸನ್ಯಾಸಿಗೆ ಶುಶ್ರೂಷೆ ಮಾಡುವುದಕ್ಕೆ ಸೀತೆಗೆ ಹೇಳಿ ರಾಮನೇ ಆ ಮೃಗವನ್ನು ತರಲು ಕೈಯಲ್ಲಿ ಅರ್ಘ್ಯವನ್ನು ಹಿಡಿದುಕೊಂಡು ಹೋದನು. ಆದರೆ ಅದು ಪೂಜೆಯನ್ನೊಲ್ಲದೆ ಓಡುತ್ತಿರಲು ರಾಮನು ಬಾಣವನ್ನು ಹೂಡಿದನು. ಅದು ಬಾಣದಿಂದ ತಪ್ಪಿಸಿಕೊಂಡು ಹೆಗ್ಗಾಡಿನಲ್ಲಿ ಮರೆಯಾಯಿತು. ಅದನ್ನು ಅನುಸರಿಸಿ ರಾಮನೂ ಮರೆಯಾದನು.

ಪ್ರಿಯನನ್ನಗಲಿದ ಸೀತೆಗೆ ಮನಸ್ಸಿನಲ್ಲಿ ಭೀತಿ ಹುಟ್ಟಿತು. ಅವಳು ಕುಟೀರದೊಳಕ್ಕೆ ಹೋಗಲು ಬಯಸಿದಳು. ಆಗ ರಾವಣನು ತನ್ನ ನಿಜ ರೂಪವನ್ನು ತಾಳಿ ತನ್ನ ಅನುಪಮ ಪರಾಕ್ರಮವನ್ನೂ ತನ್ನ ಹೆಸರನ್ನೂ ತಿಳಿಸಿದನು. ತನಗೊದಗಿದ ಆಕಸ್ಮಿಕ ಆಪತ್ತಿಗೆ ನಡುಗಿ ಸೀತೆಯು ರಾಮಲಕ್ಷ್ಮಣರನ್ನು ಕೂಗಿ ಮತ್ತೆ ಮತ್ತೆ ಮೊರೆಯಿಟ್ಟಳು.

ಸಮಯವನ್ನೇ ಹೊಂಚುತ್ತಿದ್ದ ಕಾಮುಕನು ಕನಿಕರದೋರುವನೆ ! ಅವನು ಅವಳನ್ನು ಹಿಡಿದು ತನ್ನ ಪುಷ್ಪಕ ವಿಮಾನದಲ್ಲಿ ಕೂರಿಸಿಕೊಂಡನು.

“ರಾಮನನ್ನಾದರೂ ಬೇಡು, ಲಕ್ಷ್ಮಣನನ್ನಾದರೂ ಕೂಗು, ಇಲ್ಲವೆ ಸ್ವರ್ಗದಲ್ಲಿರುವ ರಾಜನಿಗಾದರೂ ಮೊರೆಯಿಡು. ಜಿಂಕೆಮರಿಗಳು ಸೇರಿ ಹುಲಿಯನ್ನು ಕೊಲ್ಲಬಲ್ಲವೆ !” ರಾವಣನು ನುಡಿದನು.

ಸೀತೆ ಒಂದೇ ಸಮನೆ ಗಂಡನನ್ನೂ ಮೈದುನನನ್ನೂ ಕರೆಯುತ್ತಿದ್ದಳು.

“ನೀನು ಏತಕ್ಕೆ ಅಳುವೆ. ನನ್ನನ್ನೇ ನಿನ್ನ ಗಂಡನೆಂದು ಭಾವಿಸು. ಇನ್ನು ರಾಮನು ದೇವತೆಗಳನ್ನು ಕೂಡಿಕೊಂಡು ಬಂದರೂ ನನ್ನೊಡನೆ ಯುದ್ಧ ಮಾಡಲಾರ” ಎಂದನು.

ಅವಳು ಮತ್ತೆ ಮತ್ತೆ ಮೊರೆಯಿಟ್ಟಳು. ರಾವಣನನ್ನು ಶಪಿಸಿದಳು. ಆದರೂ ಅವನು ಜಗ್ಗದೆ “ದಶಕಂಠನಾದ ನಾನು ಸೀತೆಯನ್ನು ಒಯ್ಯುತ್ತಿದ್ದೇನೆ. ರಾಮನು ಕ್ಷತ್ರಿಯನಾದರೆ ನನ್ನ ಮೇಲೆ ಪರಾಕ್ರಮವನ್ನು ತೋರಲಿ” ಎಂದು ಜನಸ್ಥಾನದ ತಾಪಸರಿಗೆ ಕೂಗಿ ಹೇಳಿ ಅಲ್ಲಿಂದ ಹೊರಟನು.

ಸೀತೆಯ ಆರ್ತನಾದವನ್ನು ಕೇಳಿದ ಜಟಾಯುವು ರಾವಣನನ್ನು ತಡೆದು ಕಾದಾಡಿ ಅವನ ಕೂರಸಿಗೆ ಬಲಿಯಾಯಿತು. ಬಳಿಕ ರಾವಣನು ವಾಯುವೇಗದಿಂದ ಲಂಕೆಯನ್ನು ಸೇರಿ ಸೀತೆಯನ್ನು ಅಶೋಕವನದಲ್ಲಿ ಸೆರೆಯಿಟ್ಟನು. ಜಟಾಯು-ರಾವಣರ ಕಾಳಗವನ್ನು ನೋಡಿದ ತಾಪಸರು ರಾಮನಿಗೆ ಸೀತಾಪಹರಣವನ್ನು ತಿಳಿಸಲು ರಾಮನ ಆಶ್ರಮಕ್ಕೆ ಹೋದರು.

ಜನಸ್ಥಾನಕ್ಕೆ ಹೋಗಿದ್ದ ಸುಮಂತ್ರನಿಗೆ ಸೀತಾಪಹರಣ ವೃತ್ತಾಂತವು ತಿಳಿಯಿತು. ತನ್ನ ಸೊಸೆಯನ್ನೇ ಕಳೆದುಕೊಂಡವನಂತೆ ಅವನು ಕಣ್ಣೀರಿಟ್ಟನು. ತನ್ನ ಒಡೆಯನಾದ ದಶರಥನ ಮಕ್ಕಳನ್ನು ಅವನು ತನ್ನ ಮಕ್ಕಳಂತೆಯೇ ಪ್ರೀತಿಸುತ್ತಿದ್ದನು. ರಾಮನಾಗಲೀ ಭರತನಾಗಲೀ ಅವನನ್ನು 'ಅಪ್ಪಾ' ಎಂದೇ ಕರೆಯುತ್ತಿದ್ದರು. 'ವೃದ್ಧನಾದರೂ ತನಗಿನ್ನೂ ಸಾವು ಬರಲಿಲ್ಲವಲ್ಲ' ಎಂದು ಅವನು ಹಲುಬಿದನು. ಈ ದುಃಖವಾರ್ತೆಯನ್ನು ಭರತನಿಗೆ ಹೇಗೆ ಹೇಳಲೆಂದು ಖಿನ್ನನಾಗಿ ಅವನು ಅಯೋಧ್ಯೆಗೆ ಹಿಂದಿರುಗಿದನು.

ಸುಮಂತ್ರನು ಬರುವುದನ್ನೇ ಭರತನು ಕಾಯುತ್ತಿದ್ದನು. ಸುಮಂತ್ರನು ಬಂದುದು ತಿಳಿದ ಕೂಡಲೇ ಅವನನ್ನು ಬರಮಾಡಿಕೊಂಡು ಕುತೂಹಲದಿಂದ "ಅತ್ತಿಗೆ ಅಣ್ಣಂದಿರನ್ನು ನೋಡಿ ಬಂದೆಯಾ" ಎಂದು ಕೇಳಿದನು.

ಸುಮಂತ್ರನು ಮೌನವಾಗಿ ಚಿಂತಿಸುತ್ತಾ ನಿಂತನು. ಭರತನು ಸುಮಂತ್ರನು ಆಯಾಸಗೊಂಡಿರಬಹುದೆಂದುಕೊಂಡನು. ಆದರೂ ಅವನ ಮುಖಭಾವವನ್ನು ಕಂಡು ಅವನಿಗೆ ಆತಂಕವಾಯಿತು.

"ಅಪ್ಪಾ, ನಡುದಾರಿಯಿಂದಲೇ ಬಂದುಬಿಟ್ಟೆಯಾ ?" ಎಂದನು.

"ಇಲ್ಲ. ಅಲ್ಲಿಗೆ ಹೋಗಿದ್ದೆ, ಅಲ್ಲಿ ಅವರು ಇರಲಿಲ್ಲ. ವಾನರರ ನೆಲೆಯಾದ ಕಿಷ್ಕಿಂಧೆಗೆ ಹೋದರೆಂದು ತಿಳಿಯಿತು" ಎಂದನು.

"ವಾನರರಿಗೆ ಮನುಷ್ಯರ ಮೇಲ್ಮೆ ತಿಳಿಯದು. ಅಯ್ಯೋ, ಅವರು ಅಲ್ಲಿ ಎಷ್ಟು ದುಃಖಪಡುತ್ತಿರುವರೊ" ಎಂದು ಭರತನು ಸಂಕಟಕ್ಕೊಳಗಾದನು.

"ಮನುಷ್ಯರಿಗಿಂತ ಪ್ರಾಣಿಗಳಾದರೂ ಉಪಕಾರವನ್ನು ಸ್ಮರಿಸುತ್ತವೆ. ಅಣ್ಣನಾದ ವಾಲಿಯು ತನ್ನ ತಮ್ಮನಾದ ಸುಗ್ರೀವನ ರಾಜ್ಯವನ್ನೂ ಹೆಂಡತಿಯನ್ನೂ ಅಪಹರಿಸಲು, ಬೆಟ್ಟದಲ್ಲಿ ಸೇರಿಕೊಂಡಿದ್ದ ಸುಗ್ರೀವನ ದುಃಖವನ್ನು ಸಮದುಃಖಿಯಾದ ರಾಮನು ನಿವಾರಿಸಿದನು" ಹೀಗೆ ಇಂಗಿತವಾಗಿ ನಡೆದ ಸಮಾಚಾರವನ್ನು ಸುಮಂತ್ರನು ಭರತನಿಗೆ ತಿಳಿಸಿದನು.

ಭರತನಿಗೆ ಸಂದೇಹವಾಯಿತು. ಮರೆಮಾಚದೆ ಹೇಳಬೇಕೆಂದು ಸ್ವರ್ಗಸ್ಥನಾದ ತಂದೆಯ ಮೇಲೆ ಆಣೆಯಿಟ್ಟನು. ರಾವಣನು ಮಾಯೆಯಿಂದ ಸೀತೆಯನ್ನು ಒಯ್ದನೆಂಬುದನ್ನು ಸುಮಂತ್ರನಿಂದ ಕೇಳಿ ಭರತನು ಮೂರ್ಛಿತನಾದನು. ಅವನಿಗೆ ಏಕಕಾಲದಲ್ಲಿ ಕೋಪ ವ್ಯಸನಗಳುಂಟಾದುವು. ರೋಷದ ಮೂರ್ತಿಯಾಗಿ ಸುಮಂತ್ರನೊಡನೆ ಅಂತಃಪುರಕ್ಕೆ ಹೋಗಿ ಕೈಕೆಯನ್ನು ಕಂಡು "ನಿನಗೆ ಒಳ್ಳೆಯ ಸುದ್ದಿಯನ್ನು ತಂದಿದ್ದೇನೆ. ಯಾರನ್ನು ನೀನು ಕಾಡಿಗೆ ಅಟ್ಟಿದೆಯೋ ಅವನ ಪತ್ನಿಯನ್ನು ಅಪಹರಿಸಿದರು. ಇಕ್ಷ್ವಾಕುವಂಶಕ್ಕೆ ಸೊಸೆಯಾಗಿ ಬಂದ ನೀನು ಆ ವಂಶದವರ ಸೊಸೆಯ ಅಪಹರಣಕ್ಕೆ ಕಾರಣಳಾದೆ" ಎಂದು ಮೊನೆಮಾತಿನಿಂದ ಇರಿದನು.

ಕೈಕೆಗೆ ಸಂಕಟವಾಯಿತು. ಇದು ಹೇಳುವುದಕ್ಕೆ ಸಕಾಲವಾಗಿದೆಯೆಂದುಕೊಂಡು "ಮಹಾರಾಜನಿಗೆ ಶಾಪವಿತ್ತು" ಎಂದಳು.

ಈಗ ಸುಮಂತ್ರನು ಶಾಪವೃತ್ತಾಂತವನ್ನು ವಿವರವಾಗಿ ತಿಳಿಸಿದನು.

"ಈ ಕಾರಣದಿಂದ ನಾನೇ ಅಪರಾಧಕ್ಕೆ ಗುರಿಯಾಗಿ ರಾಮನನ್ನು ಕಾಡಿಗಟ್ಟಿದೆ. ಹಾಗೆ ಮಾಡಿದುದು ರಾಜ್ಯದ ಲೋಭದಿಂದಲ್ಲ. ಅನಿವಾರ್ಯವಾದ ಮಹರ್ಷಿಯ ಶಾಪ ಮಗನ ವಿಯೋಗದಿಂದಲ್ಲದೆ ನಡೆದೀತೆ ?" ಕೈಕೆಯು ಹೇಳಿದಳು.

ಭರತನು "ಹಾಗಾದರೆ ನೀನು ನನ್ನನ್ನೇಕೆ ಕಳುಹಲಿಲ್ಲ" ಎಂದು ಕೇಳಿದನು.

"ನೀನು ಮಾವನ ಮನೆಯಲ್ಲಿಯೇ ಇರುತ್ತಿದ್ದುದರಿಂದ ನಿನ್ನ ಅಗಲಿಕೆ ಮಹಾರಾಜನಿಗೆ ಒಗ್ಗಿಹೋಗಿತ್ತು" ಎಂದಳು.

"ಸರಿ, ನೀನು ಹದಿನಾಲ್ಕು ವರ್ಷಗಳ ಗಡುವನ್ನೇಕೆ ವಿಧಿಸಿದೆ" ಎನ್ನಲು "ಹದಿನಾಲ್ಕು ದಿನಗಳೆಂದು ಹೇಳಬೇಕೆಂದಿದ್ದರೂ ಮನಸ್ಸು ಶೋಕಾಕ್ರಾಂತವಾಗಿದ್ದುದರಿಂದ ಬಾಯಿ ತಪ್ಪಿ ಹದಿನಾಲ್ಕು ವರ್ಷಗಳೆಂದು ಬಂದುಬಿಟ್ಟಿತು" ಎಂದು ಕೈಕೆ ವಿವರಿಸಿದಳು.

"ಇದು ವಸಿಷ್ಠ, ವಾಮದೇವ ಮುಂತಾದವರಿಗೆಲ್ಲ ಗೊತ್ತಿದ್ದಿತು" ಎಂದು ಸುಮಂತ್ರನು ಹೇಳಿದನು.

ತಾಯಿಯಲ್ಲಿ ತಪ್ಪಿಲ್ಲದಿರುವುದು ತನ್ನ ಭಾಗ್ಯವೆಂದುಕೊಂಡು "ಸೋದರ ಪ್ರೇಮದಿಂದ ನಿನ್ನನ್ನು ದೂಷಿಸಿದೆ. ನನ್ನ ತಪ್ಪನ್ನು ಕ್ಷಮಿಸು" ಎಂದು ಭರತನು ತಾಯಿಯ ಕಾಲಿಗೆರಗಿದನು. "ಕಂದನ ತಪ್ಪನ್ನು ಕ್ಷಮಿಸದ ತಾಯಿಯೂ

ಇದ್ದಾಳೆಯೆ ?" ಎಂದು ಕೈಕೆಯು ಮಗನನ್ನು ವಾತ್ಸಲ್ಯದಿಂದ ಮೇಲೆತ್ತಿದಳು. ಅನಂತರ ತನ್ನ ತಾಯಿಯರನ್ನು ಕೂಡಿಕೊಂಡು ಚತುರಂಗ ಬಲದೊಡನೆ ರಾಮನ ಸಹಾಯಕ್ಕೆ ಭರತನು ಹೊರಟನು.

ರಾಮಲಕ್ಷ್ಮಣರು ಈ ವೇಳೆಗೆ ರಾವಣನನ್ನು ಕೊಂದು ಸೀತೆಯೊಡನೆ ಅಯೋಧ್ಯಾಭಿಮುಖರಾಗಿ ಬರುತ್ತಿದ್ದರು. ಜನಸ್ಥಾನದ ಋಷ್ಯಾಶ್ರಮದ ತಪಸ್ವಿಗಳು ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡು ರಾಮನನ್ನು ಸ್ವಾಗತಿಸಿ ಸತ್ಕರಿಸಿದರು. ದುಷ್ಟ ರಾಕ್ಷಸರನ್ನು ಕೊಂದು ಪತಿವ್ರತೆಯಾದ ಸೀತೆಯನ್ನು ಸ್ವೀಕರಿಸಿ ಮತ್ತೆ ಮುನಿಜನಗಳ ಶಾಂತವನಕ್ಕೆ ಬಂದೆನೆಂದು ರಾಮನಿಗೆ ಸಂತೋಷ.

ತಪಸ್ವಿನಿಯರು ತಮಗೆ ವಂದಿಸಲು ಬಂದ ಸೀತೆಯನ್ನು ಸುತ್ತುಗಟ್ಟಿ "ವೈದೇಹಿ, ಸೀತೆಯೆ, ಜಾನಕಿಯೆ, ಸೊಸೆಯೆ ಬಾ" ಎಂದು ಪರಿಪರಿಯಾಗಿ ಸ್ನೇಹದಿಂದ ಕರೆದು ಸತ್ಕರಿಸಿ ಅವಳನ್ನು ಪ್ರೀತಿಯಿಂದ ಬೀಳ್ಕೊಟ್ಟರು.

ರಾಮನು ಸೀತೆಯೊಡನೆ ತಾನಿದ್ದ ಆಶ್ರಮದ ಬಳಿಗೆ ಬಂದನು. ಅಲ್ಲಿ ಅವನು ಕಳೆದ ದಿನಗಳು ಅವನ ಸ್ಮರಣೆಗೆ ಬಂದುವು.

ಸೀತೆಯು ನೀರೆರೆದು ಸಾಕಿದ ಮರಗಿಡಗಳನ್ನು ಅವಳಿಗೆ ತೋರುತ್ತಾ ಮುಂದೆ ನಡೆದು ರಾಮನು "ಜಾನಕಿ, ಇಲ್ಲಿಯೇ ನಾವು ಕುಳಿತು ತಂದೆಯ ಶ್ರಾದ್ಧವನ್ನು ಹೇಗೆ ಮಾಡಬೇಕೆಂದು ಯೋಚಿಸುತ್ತಿದ್ದಾಗ ಕಾಂಚನಪಾರ್ಶ್ವಮೃಗ ಕಾಣಿಸಿಕೊಂಡಿದ್ದು" ಎಂದನು. ಸೀತೆ ಈ ಮಾತನ್ನಾಡಬೇಡವೆನ್ನಲು "ಇಷ್ಟೇಕೆ ಭಯಪಡುವೆ ? ಆ ಕಾಲ ಕಳೆದುಹೋಯಿತಲ್ಲವೆ ?" ಎಂದು ಸಮಾಧಾನ ಪಡಿಸಿದನು.

ಅಷ್ಟರಲ್ಲಿ ಭರತನು ತನ್ನ ಪರಿವಾರದೊಡನೆ ಜನಸ್ಥಾನಕ್ಕೆ ಬರುತ್ತಿದ್ದನು. ಅದನ್ನು ಕಂಡು ಅವರು ಸಂತೋಷದಿಂದ ಉಬ್ಬಿಹೋದರು. ರಾಮ ಲಕ್ಷ್ಮಣ ಸೀತೆಯರು ಮುಂದೆ ಬಂದು ತಾಯಿಯರಿಗೆಲ್ಲ ಕ್ರಮವಾಗಿ ನಮಸ್ಕರಿಸಿದರು. ಭರತನು ಬಂದು ರಾಮ ಸೀತೆ ಲಕ್ಷ್ಮಣರಿಗೆ ವಂದಿಸಿದನು. ಕೈಕೆಯೀ ರಾಮನಿಗೆ ರಾಜ್ಯವನ್ನು ಸ್ವೀಕರಿಸಲು ಕೇಳಿಕೊಂಡಳು.

ವಸಿಷ್ಠ ವಾಮದೇವರು ತೀರ್ಥವನ್ನು ಹೊತ್ತು ತಂದು ಅಲ್ಲೇ ಅಭಿಷೇಕ ಮಾಡಿದರು. ರಾಮನ ವಿಜಯಘೋಷ ನಭೋಮಂಡಲವನ್ನು ಮುಟ್ಟಿತು. ಕೈಕೆಗಾದ ಆನಂದ ವರ್ಣನಾತೀತವಾಯಿತು.

ರಾಮನು ಆಕಾಶವನ್ನು ನೋಡುತ್ತಾ "ತಂದೆಯೆ, ಇನ್ನು ನಿನ್ನ ದೈನ್ಯವನ್ನು ಬಿಟ್ಟು, ಸ್ವರ್ಗದಲ್ಲಿದ್ದರೂ ಆನಂದಪಡು. ನನಗೆ ಯಾವುದನ್ನು ಮಾಡಬೇಕೆಂದು ನೀನು ಕೋರುತ್ತಿದ್ದೆಯೋ ಅದು ಇಂದು ನೆರವೇರಿತು. ಈಗ ನಾನು ರಾಜನಾಗಿ ಧರ್ಮದ ಮತ್ತು ಲೋಕರಕ್ಷಣೆಯ ಭಾರವನ್ನು ವಹಿಸಿದ್ದೇನೆ" ಎಂದನು.

ಭರತ ಶತ್ರುಘ್ನರಿಗೆ ಬಹಳ ಸಂತೋಷವಾಯಿತು. ಅಭಿಷಿಕ್ತನಾದ ರಾಮನನ್ನು ಲಕ್ಷ್ಮಣಾದಿಯಾಗಿ ಕಪಿವೀರರೆಲ್ಲ ಅಭಿನಂದಿಸಿದರು. ಕೈಕೆಗೆ ರಾಮನ ಅಭಿಷೇಕವನ್ನು ಎಷ್ಟು ನೋಡಿದರೂ ತೃಪ್ತಿಯಾಗದು. ಆದ್ದರಿಂದ ಅಭಿಷೇಕ ಮಹೋತ್ಸವನ್ನು ಅಯೋಧ್ಯೆಯಲ್ಲಿಯೂ ನೋಡಬೇಕೆಂದು ಅವಳು ಆಶಿಸಿದಳು. ರಾಮನೂ ಅದಕ್ಕೆ ಆಗಬಹುದೆಂದನು.

ಅಷ್ಟರಲ್ಲಿ ಅಲ್ಲಿಗೆ ರಾವಣನ ಪುಷ್ಪಕ ವಿಮಾನವು ಬಂದಿತು. ಅದರಲ್ಲಿ ಎಲ್ಲರೂ ಕುಳಿತುಕೊಂಡು ಅಯೋಧ್ಯೆಗೆ ಹೋದರು. ಅಯೋಧ್ಯೆಯಲ್ಲಿ ಮತ್ತೊಮ್ಮೆ ವೈಭವದಿಂದ ರಾಮನಿಗೆ ಪಟ್ಟಾಭಿಷೇಕವನ್ನು ಕೈಕೆಯೇ ನಿಂತು ಮಾಡಿಸಿದಳು.

# ಪಂಚರಾತ್ರ

ಪಾಂಡವರು ದ್ಯೂತದಲ್ಲಿ ಸೋತು ರಾಜ್ಯಭ್ರಷ್ಟರಾಗಿ ಹನ್ನೆರಡು ವರುಷ ವನವಾಸ ವನ್ನೂ ಒಂದು ವರುಷ ಅಜ್ಞಾತವಾಸವನ್ನೂ ಅನುಭವಿಸಬೇಕಾಗಿ ಬಂದಿತು. ಹನ್ನೆರಡು ವರುಷ ಮುಗಿದ ಮೇಲೆ ಅಜ್ಞಾತವಾಸಕ್ಕೆಂದು ಪಾಂಡವರು ಯಾರೂ ಅರಿಯದಂತೆ ವೇಷ ಮರೆಸಿಕೊಂಡು ವಿರಾಟನಗರಿಗೆ ಹೋಗಿ ವಿರಾಟೇಶ್ವರನ ಆಶ್ರಯದಲ್ಲಿ ಸೇರಿಕೊಂಡಿದ್ದರು.

ಭಗವಂತ ಎಂಬ ಹೆಸರಿನಿಂದ ಧರ್ಮರಾಯನು ಬ್ರಾಹ್ಮಣ ಯತಿಯಾಗಿಯೂ, ಪಾಕಶಾಲೆಯ ಯಜಮಾನನಾಗಿ ಭೀಮನೂ, ಬೃಹನ್ನಳೆಯೆಂಬ ಹೆಸರಿನಿಂದ ಅಂತಃಪುರದ ನಾಟ್ಯಾಚಾರ್ಯನಾಗಿ ಅರ್ಜುನನೂ, ಗೋಶಾಲೆ ಅಶ್ವಶಾಲೆಗಳ ಅಧಿಕಾರಿಗಳಾಗಿ ನಕುಲ ಸಹದೇವರೂ ಇದ್ದರು. ದ್ರೌಪದಿ ಅಂತಃಪುರದಲ್ಲಿ ಗಂಧದಾಯಕಿಯಾಗಿದ್ದಳು.

ಪಾಂಡವರ ಅಜ್ಞಾತವಾಸದ ಅವಧಿ ಮುಗಿಯುತ್ತ ಬಂದಿತ್ತು. ದುರ್ಯೋಧನನು ಭೀಷ್ಮ ದ್ರೋಣಾದಿ ಗುರುಹಿರಿಯರನ್ನು ಮುಂದಿಟ್ಟುಕೊಂಡು ಒಂದು ಯಾಗ ವನ್ನು ಮಾಡಿದನು. ಆ ಯಾಗದ ವೈಭವವನ್ನು ಹೇಳತೀರದು. ಕೌರವನು ಯಜ್ಞದೀಕ್ಷಿತನಾಗಲು ಭೂಮಿಯೇ ದೀಕ್ಷೆಯನ್ನು ಪಡೆದಂತೆ ಕಾಣುತ್ತಿತ್ತು! ಹವಿಸ್ಸಿನಿಂದ ಅಗ್ನಿ, ಧನದಿಂದ ದ್ವಿಜರು ಮಾತ್ರವಲ್ಲದೆ ಮಾನವರಾದಿಯಾಗಿ ಮೃಗ, ಪಕ್ಷಿ, ಗೋ ಸಮೂಹಕ್ಕೆಲ್ಲಾ ಸಂತುಷ್ಟಿಯಾಯಿತು. ಕೌರವನ ಉದಾರ ಗುಣವನ್ನು ಲೋಕವೇ ಕೊಂಡಾಡಿತು.

ಯಜ್ಞವು ಸಮಾಪ್ತಿಯಾದ ಮೇಲೆ ಆ ಯಜ್ಞಮಂಟಪದ ಬಳಿಯಲ್ಲಿ ದುರ್ಯೋಧನನು ನೆರೆದಿದ್ದ ರಾಜರನ್ನೆಲ್ಲಾ ಸಭೆ ಸೇರಿಸಿದನು.

ದ್ರೋಣನು ಸಂತೋಷದಿಂದ "ದುರ್ಯೋಧನನಿಗೆ ಈ ವಿಧವಾದ ಧರ್ಮ ಕಾರ್ಯ ದಲ್ಲಿ ಬುದ್ಧಿ ಹುಟ್ಟಿದುದು ನನ್ನ ಅದೃಷ್ಟವೆನ್ನಬೇಕು. ಏಕೆಂದರೆ ಶಿಷ್ಯನ ದೋಷವು ಗುರುವಿಗೂ ಉಂಟಾಗುತ್ತದೆ ಅದು ಅವನ ಬಂಧುಮಿತ್ರರಿಗೂ ಬರುವುದಿಲ್ಲ ಮತ್ತು ಬಾಲ್ಯದಲ್ಲಿಯೆ ಗುರುವಿಗೆ ಪುತ್ರನನ್ನು ಒಪ್ಪಿಸುವುದರಿಂದ ಹೆತ್ತವರಿಗೂ ಬರುವುದಿಲ್ಲ" ಎಂದು ಭೀಷ್ಮನಿಗೆ ಹೇಳಿದನು.

ಅದಕ್ಕೆ ಭೀಷ್ಮನು "ಹೌದು, ಜೂಜಿನಿಂದ ಹಣವನ್ನು ಸಂಪಾದಿಸಿ ಗರ್ವಿಷ್ಠ ನಾಗಿಯೂ ಯುದ್ಧಾಸಕ್ತನಾಗಿಯೂ ಅಪಕೀರ್ತಿಯನ್ನು ಗಳಿಸಿದ ದುರ್ಯೋ

ಧನನು ಈಗ ಧರ್ಮಕಾರ್ಯವನ್ನು ಮಾಡಿದುದರಿಂದ ಅನೇಕ ಅಪ್ಸರ ಕನ್ಯೆಯಿಂದ ಶೋಭಿಸುತ್ತಿದ್ದಾನೆ" ಎಂದನು.

ಯಾಗ ಮಾಡಿದುದರಿಂದ ದುರ್ಯೋಧನನಿಗೂ ಬಹಳ ಸಂತೋಷವಾಗಿತ್ತು. ಅವನು ಕರ್ಣ ಶಕುನಿಯರೊಡನೆ "ಇಂದು ನನ್ನ ಮನಸ್ಸು ಧರ್ಮದಲ್ಲಿ ನೆಲೆಸಿತು. ಗುರುಜನರು ಸಂತುಷ್ಟರಾದರು. ಈಗ ನಾನು ಜನರ ವಿಶ್ವಾಸಕ್ಕೆ ಪಾತ್ರನಾದೆ. ನನಗೆ ಬಂದಿದ್ದ ದುಷ್ಕೀರ್ತಿ ಹೋಯಿತು. ಸತ್ತವರಿಗೆ ಸ್ವರ್ಗವು ಲಭಿಸುತ್ತದೆಯೆಂಬ ಮಾತು ಸುಳ್ಳು. ಅದು ಪರೋಕ್ಷವಾದುದಲ್ಲ, ಈ ಭೂಮಿಯಲ್ಲೇ ಲಭಿಸುತ್ತದೆ" ಅಂದನು.

ಕರ್ಣನು "ನೀನು ನ್ಯಾಯವಾಗಿ ಗಳಿಸಿದ ಧನವು ನ್ಯಾಯವಾಗಿಯೇ ವೆಚ್ಚವಾಯಿತು. ಅರಸರಿಗೆ ಐಶ್ವರ್ಯವು ಬಿಲ್ಲಿನಿಂದ ಬರತಕ್ಕದ್ದು. ಅವರು ತಮ್ಮ ಮಕ್ಕಳಿಗೆ ಹಣವನ್ನು ಕೂಡಿಡಬಾರದು. ತಾವು ಸಂಪಾದಿಸಿದ ಧನವನ್ನು ಬ್ರಾಹ್ಮಣರಿಗೆ ದಾನಮಾಡಿ ಮಕ್ಕಳಿಗೆ ಬಿಲ್ಲನ್ನು ಮಾತ್ರ ಇಡಬೇಕು" ಎಂದನು.

ಅದಕ್ಕೆ ಶಕುನಿಯು "ಗಂಗೆಯಲ್ಲಿ ಮುಳುಗಿ ಪಾಪವನ್ನೆಲ್ಲ ಕಳೆದು ಬಂದಿರುವ ಕರ್ಣನು ಸರಿಯಾಗಿಯೇ ಹೇಳಿದ" ಎಂದು ಹಾಸ್ಯ ಮಾಡಿದನು.

ಆ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಕರ್ಣನು "ಯಯಾತಿಯೇ ಮೊದಲಾದ ಪ್ರಖ್ಯಾತ ರಾಜರು ತಮ್ಮ ಶರೀರ, ದೇಶ, ಕೋಶಗಳನ್ನು ಅಗಲಿದರೂ ತಮ್ಮ ಯಾಗಗಳಿಂದ ಕೀರ್ತಿಶೇಷರಾಗಿದ್ದಾರೆ" ಎಂದನು.

ಬಳಿಕ ಸಭಿಕರೆಲ್ಲರೂ ಹೊಗಳುತ್ತಿರಲು ಕೌರವರಾಜನು ದ್ರೋಣನಿಗೆ ವಂದಿಸಿದನು. ಹಾಗೆ ವಂದಿಸುವುದು ಕ್ರಮವಲ್ಲವೆಂದೂ ಪ್ರಶಸ್ತಾಕೃತಿಯಿಂದಿರುವ ವೃದ್ಧನಾದ ಭೀಷ್ಮನಿಗೆ ಮೊದಲು ವಂದಿಸುವುದು ಕ್ರಮವೆಂದೂ ದ್ರೋಣನು ಕೌರವನಿಗೆ ತಿಳಿಸಿದನು.

ಭೀಷ್ಮನು ವಿನಯದಿಂದ "ಅದು ಸರಿಯಲ್ಲ, ಆಚಾರ್ಯ. ನೀನು ನನಗಿಂತಲೂ ಶ್ರೇಷ್ಠ, ಬ್ರಾಹ್ಮಣ ಮತ್ತು ನಮಗೆಲ್ಲರಿಗೂ ಗುರುವಾಗಿದ್ದೀಯೆ. ನಾವೆಲ್ಲರೂ ನಿನ್ನ ಶಿಷ್ಯರಲ್ಲವೆ ?" ಎಂದು ನುಡಿದನು. ಮಹಾತ್ಮರು ತಮ್ಮ ಶ್ರೇಷ್ಠತೆಯನ್ನು ಹೇಳಿಕೊಳ್ಳುವುದಿಲ್ಲವೆಂದು ತಾನೇ ನಮಸ್ಕರಿಸಲು ದುರ್ಯೋಧನನಿಗೆ ದ್ರೋಣನು ಹೇಳಿದನು.

ದ್ರೋಣನಿಗೆ ಕೌರವನು ವಂದಿಸಿದಾಗ "ನಿನಗೆ ಆಗಾಗ ಅವಭೃತ ಸ್ನಾನದಿಂದ ಶ್ರಮವುಂಟಾಗಲಿ" ಎಂದು ಅವನು ಆಶೀರ್ವದಿಸಿದನು. ಬಳಿಕ ಭೀಷ್ಮನಿಗೆ ನಮಸ್ಕರಿಸಲು ಅವನಿಗೆ ಯಾವಾಗಲೂ ಇದೇ ಬಗೆಯ ಶಾಂತಿಯುಂಟಾಗಲೆಂದು ಅವನು ಹರಸಿದನು. ಕೌರವನು ತನ್ನ ಮಾವನಾದ ಶಕುನಿಗೆ ನಮಸ್ಕರಿಸಿದನು. "ಹೀಗೆಯೇ ಯಾಗಗಳನ್ನು ಮಾಡಿ ಜರಾಸಂಧನಂತೆ ರಾಜರುಗಳನ್ನು ಗೆದ್ದು ರಾಜ ಸೂಯ ಯಾಗವನ್ನು ಮಾಡುವವನಾಗು" ಶಕುನಿ ಹರಸಿದನು.

ಶಕುನಿಯು ಆಶೀರ್ವಚನದಲ್ಲಿಯೂ ಯುದ್ಧೋದ್ಯಮವನ್ನೇ ಸೂಚಿಸುವನಲ್ಲ ಎಂದು ದ್ರೋಣನಿಗೆ ಖೇದವೆನಿಸಿತು.

ಗುರುಹಿರಿಯರನ್ನು ನಮಸ್ಕರಿಸಿಯಾದ ಮೇಲೆ ದುರ್ಯೋಧನನು ತನ್ನ ಮಿತ್ರನ ಸ್ನೇಹವನ್ನು ಸವಿಯಲು ಕರ್ಣನ ಬಳಿಗೆ ಹೋದನು. ಅವನನ್ನು ಕರ್ಣನು ಶ್ಲಾಘಿಸಿ ಪ್ರೀತಿಯಿಂದ ಆಲಿಂಗಿಸಿಕೊಂಡನು.

ಯಾಗಕ್ಕೆ ಬಂದಿದ್ದ ಭೀಷ್ಮಕನನ್ನು ದ್ರೋಣನೂ, ಭೂರಿಶ್ರವನನ್ನು ಭೀಷ್ಮನೂ ಕೌರವನಿಗೆ ಪರಿಚಯ ಮಾಡಿಕೊಟ್ಟರು. ದುರ್ಯೋಧನನು ಅವರಿಗೆ ನಮಸ್ಕರಿಸಿ ಯಾದ ಮೇಲೆ ದ್ರೋಣನು "ಕೃಷ್ಣನು ಕಳುಹಿಸಿರುವ ಅಭಿಮನ್ಯುವು ನಿನಗೆ ವಂದಿಸುವನು" ಎಂದು ಕೌರವನಿಗೆ ಹೇಳಿದನು.

ಅಷ್ಟರಲ್ಲಿ ಶಕುನಿಯು ಮುಂದೆ ಬಂದು ಜರಾಸಂಧನ ಮಗನಾದ ಸಹದೇವನನ್ನು ತೋರಿ "ಇವನನ್ನು ನೋಡು" ಎಂದು ಕೌರವನಿಗೆ ಹೇಳಿದನು. ದುರ್ಯೋಧನನು ಮೊದಲು ಸಹದೇವನನ್ನೂ ಅನಂತರ ಅಭಿಮನ್ಯುವನ್ನೂ ಆಶೀರ್ವದಿಸಿ ಒಮ್ಮೆ ರಾಜಸಮೂಹವನ್ನು ನೋಡಿ ವಿರಾಟನೇಕೆ ಬರಲಿಲ್ಲವೆಂದನು. ಶಕುನಿಯು ವಿರಾಟನ ಬಳಿಗೆ ತಾನೇ ದೂತನನ್ನು ಕಳಿಸಿದ್ದುದಾಗಿಯೂ ಅವನು ದಾರಿಯಲ್ಲಿ ಬರುತ್ತಿರಬಹುದೆಂದೂ ಉತ್ತರಿಸಿದನು.

ನೆರೆದಿದ್ದ ರಾಜರನ್ನೆಲ್ಲ ಸನ್ಮಾನಿಸಿಯಾದ ಬಳಿಕ ದುರ್ಯೋಧನನು ತನ್ನ ಗುರು ದಕ್ಷಿಣೆಯನ್ನು ಸ್ವೀಕರಿಸಬೇಕೆಂದು ದ್ರೋಣನನ್ನು ಪ್ರಾರ್ಥಿಸಿಕೊಂಡನು. ದ್ರೋಣನು ಬೇಕಾದಾಗ ತಾನೇ ಯಾಚಿಸಿ ತೆಗೆದುಕೊಳ್ಳುವುದಾಗಿ ಜಾರಿ ಕೊಳ್ಳಲು ಪ್ರಯತ್ನಿಸಿದನು.

ಕೌರವನು "ಏನು ! ಗುರುಗಳಾದ ನೀವು ನನ್ನನ್ನು ಯಾಚಿಸುವುದೆಂದರೇನು ? ಗುರುಗಳಾದ ನೀವೂ ಈ ಮಾತನಾಡಬಹುದೆ ?" ಖಿನ್ನನಾಗಿ ಕೇಳಿದನು.

ಭೀಷ್ಮನು "ಕುಮಾರ, ದುರ್ಯೋಧನ, ಬಲಮಂತ್ರದಿಂದ ಪ್ರಯೋಜನವೇನು ? ನೀನು ಪ್ರೀತಿಯಿಂದ ಕೊಟ್ಟ ನೀರನ್ನು ಆಚಾರ್ಯನು ಕುಡಿದನು. ನಿನ್ನ ಬೆಳ್ಗೊಡೆಯ ಅಡಿಯಲ್ಲಿ ನಿನ್ನೊಡನೆ ಅವನೂ ಸುಖಿಸಿದನು. ಅವನು ಆಶಿಸಬಹುದಾದುದು ತಾನೆ ಏನಿದೆ! ನಿನ್ನಿಂದ ಸ್ವೀಕರಿಸುವಷ್ಟು ಅವನು ದರಿದ್ರನೆ ?" ಎಂದನು.

ದುರ್ಯೋಧನನಿಗೆ ಸಮಾಧಾನವಾಗದೆ "ನಿಮಗೇನಾಗಬೇಕು ? ಈಗ ನಿಮಗೇನನ್ನು ಮಾಡಲಿ ? ನಾನು ನಿಮ್ಮ ಪ್ರಾಣಾಧಿಕನಾಗಿದ್ದೇನೆ. ಎಲ್ಲ ವಿದ್ಯೆಗಳನ್ನೂ ನಿಮ್ಮಿಂದ ಕಲಿತಿದ್ದೇನೆ. ನಿಮ್ಮ ದೆಸೆಯಿಂದ ನಾನು ಶೌರ್ಯವನ್ನು ತೋರಿ ವೀರನೆನಿಸಿಕೊಂಡಿದ್ದೇನೆ. ನಿಮಗೆ ಸಂದೇಹವೇಕೆ ? ನನ್ನ ಕೈಲಿರುವ ಈ ಗದೆಯನ್ನು ಬಿಟ್ಟು ಉಳಿದ ನನ್ನ ಸರ್ವಸ್ವವೆಲ್ಲ ನಿಮ್ಮವಲ್ಲವೆ ?" ಎಂದು ದೈನ್ಯದಿಂದ ಬೇಡಿಕೊಂಡನು.

ದುಃಖದಿಂದ ಉಕ್ಕಿ ಹರಿಯುವ ಕಂಬನಿಯನ್ನು ಒರಸಿಕೊಳ್ಳುತ್ತ ದ್ರೋಣನು ಹೇಳುವೆನೆಂದನು.

ಭೀಷ್ಮನು ಕೌರವನನ್ನು ಕುರಿತು "ನಿನ್ನ ಪ್ರಯತ್ನ ನಿಷ್ಫಲವಾಯಿತಲ್ಲ" ಎಂದುದರಿಂದ ದುರ್ಯೋಧನನು ಕಳಶದಲ್ಲಿ ನೀರನ್ನು ತರಿಸಿ ಮುಖವನ್ನು ತೊಳೆದುಕೊಳ್ಳಲು ಗುರುವಿಗೆ ಕೊಡಲು ಹೋದನು.

"ಇವೆಲ್ಲ ನನ್ನ ಕಣ್ಣೀರನ್ನು ತೊಳೆಯಲಾರವು. ನನ್ನ ಅಪೇಕ್ಷೆಯನ್ನು ನೀನು ನಡೆಸಿದರೆ ಅದೇ ನನಗೆ ಮುಖೋದಕ" ದ್ರೋಣನು ತಗ್ಗಿದ ತಲೆಯನ್ನೆತ್ತದೆ ದುಃಖದಿಂದ ಹೇಳಿದನು.

ಕೌರವನು ಮತ್ತೂ ಖಿನ್ನನಾದನು. ಗುರುವಿನ ಕಣ್ಣೀರನ್ನು ನೋಡಲಾರದೆ "ಮೊದಲಿನಂತೆ ನಾನು ಶಠನೆಂದು ನೀವು ಭಾವಿಸಿದರೂ, ನನ್ನ ಅಪೇಕ್ಷೆಯನ್ನು ಇವನು ನಡೆಸುವನೊ ಇಲ್ಲವೊ ಎಂದು ಅನುಮಾನಿಸಿದರೂ, ಈ ನೀರಿನಿಂದಲೇ ನಿಮ್ಮ ಇಷ್ಟಾರ್ಥವನ್ನು ಧಾರೆ ಎರೆದು ಕೊಡುವೆನು" ಎಂದು ಹೇಳಿ ಅವನ ಕೈಯಲ್ಲಿ ನೀರನ್ನು ಹಾಕಿದನು.

ಗುರುವಿಗೆ ಸಮಾಧಾನವಾಯಿತು. "ಈಗ ನನಗೆ ನಂಬಿಕೆಯುಂಟಾಯಿತು. ಹನ್ನೆರಡು ವರ್ಷಗಳಿಂದ ಕಾಡಿನಲ್ಲಿ ವಾಸಿಸುತ್ತಿರುವ ಪಾಂಡವರಿಗೆ ನೀನು ಅರ್ಧ ರಾಜ್ಯವನ್ನು ವಿಭಾಗಿಸಿ ಕೊಟ್ಟುಬಿಡು. ಇದೇ ನನ್ನ ಭಿಕ್ಷೆ. ಇದೇ ನನ್ನ ದಕ್ಷಿಣೆ" ದ್ರೋಣನು ಹೇಳಿದನು.

ತಕ್ಷಣ ಶಕುನಿಯು ಮುಂದೆ ಬಂದು "ಆಚಾರ್ಯ, ಬೇಡ, ಬೇಡ. ಗುರುಭಕ್ತಿಯಿಂದ ಕೇಳಿದುದನ್ನು ನಿನಗೆ ಕೊಡುವೆನೆಂದ ಕೌರವನಿಗೆ ದಕ್ಷಿಣೆಯ ನೆಪದಿಂದ ಹೀಗೆ ಧರ್ಮವಂಚನೆ ಮಾಡುವುದು ಸರಿಯೆ ?" ಎಂದು ಕ್ರೋಧದಿಂದ ಆಕ್ಷೇಪಿಸಿದನು. ಸನ್ನಿವೇಶ ವಿರಸಕ್ಕಿಟ್ಟುಕೊಂಡಿತು.

ದ್ರೋಣನು ಕೋಪದಿಂದ "ಗಾಂಧಾರ ದೇಶಕ್ಕೆ ನೀನು ರಾಜನೆಂದು ಹೀಗೆ ಬಾಯಿಗೆ ಬಂದಂತೆ ಮಾತನಾಡಬೇಡ. ನಿನ್ನಲ್ಲಿರುವ ಕೆಟ್ಟ ಸ್ವಭಾವವನ್ನೇ ಲೋಕಕ್ಕೆಲ್ಲಾ ನೀನು ಅನ್ವಯಿಸುವಂತಿದೆ. ದಾಯಾದಿಗಳಿಗೆ ಅರ್ಧ ರಾಜ್ಯವನ್ನು ಕೊಡು ಎನ್ನುವುದು ಮೋಸವೆ? ಕೇಳಿದಾಗ ಕೊಡುವುದು ಮೇಲೋ ಇಲ್ಲವೆ ಅವರೇ ಬಿಡದೆ ಬಲಾತ್ಕಾರದಿಂದ ತೆಗೆದುಕೊಳ್ಳುವುದು ಮೇಲೋ ?" ಎಂದನು.

ದ್ರೋಣನು ಹೇಳುವುದು ಸರಿಯೆಂದೂ ಮಿತ್ರರೂಪದಿಂದ ಶತ್ರುವಾಗಿರುವ ಶಕುನಿಯ ಮಾತನ್ನು ಕೇಳಬಾರದೆಂದೂ, ಪಾಂಡವರ ವನವಾಸಕ್ಕೂ ಮತ್ತು ಅವರು ಕೌರವನಿಗೆ ಶತ್ರುಗಳಾಗುವುದಕ್ಕೂ ಶಕುನಿಯೇ ಮೂಲನೆಂದೂ ಭೀಷ್ಮನು ದುರ್ಯೋಧನನಿಗೆ ಬುದ್ಧಿ ಹೇಳಿದನು.

ದುರ್ಯೋಧನನು "ನಿಜವಾಗಿಯೂ ಪಾಂಡವರು ರಾಜ್ಯವನ್ನು ಕಿತ್ತುಕೊಳ್ಳುವಷ್ಟು ಪರಾಕ್ರಮಿಗಳಾಗಿದ್ದರೆ ಅಂದು ನಾವು ಸಭೆಯಲ್ಲಿ ಅವರನ್ನು ಅವಮಾನಪಡಿಸಿದಾಗ ಅವರೇಕೆ ಪ್ರತಿಭಟಿಸಲಿಲ್ಲ ?" ಎಂದು ಪ್ರಶ್ನಿಸಿದನು.

ದ್ರೋಣನು ಉತ್ತರವಾಗಿ, ಆಗ ಭೀಮನು ಮಹಾ ಕೋಪದಿಂದ ಮೇಲೇಳಲು ಯುಧಿಷ್ಠಿರನು ತಡೆದನೆಂದೂ ಇಲ್ಲದಿದ್ದರೆ ಹಾಗೆ ಆಕ್ಷೇಪಿಸುವ ಶಕುನಿಯ ಸೊಲ್ಲು ಕೇಳಿಬರುತ್ತಿರಲಿಲ್ಲವೆಂದೂ ತಿಳಿಸಿದನು. ಸಮಾಧಾನಪಡಿಸಲು ಆಚಾರ್ಯನನ್ನು ಕುರಿತು ಭೀಷ್ಮನು "ಕಾರ್ಯ ದೊಡ್ಡದೇ ಹೊರತು ಕಲಹವಲ್ಲ"ವೆನ್ನಲು ದ್ರೋಣನು ಇಮ್ಮಡಿ ರೋಷದಿಂದ "ಅದಕ್ಕೇನು ? ಕಲಹವೇ ಆಗಿಹೋಗಲಿ" ಎಂದನು.

ಭೀಷ್ಮನು ಉಪಾಯದಿಂದ ದುರ್ಯೋಧನನ ಮನಸ್ಸನ್ನು ತಿರುಗಿಸಬೇಕೆಂದು ಒಳ್ಳೆಯ ಮಾತಿನಿಂದ "ಅಪ್ಪ, ದುರ್ಯೋಧನ, ಪಾಂಡವರು ಬಲಹೀನರು, ನಿರಾಶ್ರಿತರು. ನಿನ್ನೊಡನೆ ಸ್ನೇಹದಿಂದಿರಲು ಅವರು ಬಯಸುತ್ತಾರೆ. ಅವರು ಮೃಗದಂತೆ ಕಾಡಿನಲ್ಲಿ ವಾಸಿಸುವುದನ್ನು ವಂಶಕ್ಕೆ ಹಿರಿಯನಾದ ನೀನು ನೋಡುವೆಯ ?" ಎಂದನು.

ಶಕುನಿಯು "ಅವರು ಹಾಗೆಯೇ ಜೀವಿಸಲಿ" ಎಂದನು.

ಮದಿಸಿದ ಆನೆಯನ್ನು ಒಳ್ಳೆಯ ಮಾತಿನಿಂದ ವಶಪಡಿಸಿಕೊಳ್ಳುವಂತೆ ಹಿತವಚನಕ್ಕೆ ಕೋಪಿಸಿಕೊಳ್ಳುವ ಕೌರವನನ್ನು ವಶಪಡಿಸಿಕೊಳ್ಳಬೇಕೆಂದು ದ್ರೋಣನಿಗೆ ಕರ್ಣನು ಸಲಹೆ ಮಾಡಿದನು. ಆ ಸಲಹೆ ದ್ರೋಣನಿಗೆ ಸರಿಯೆನಿಸಿತು.

ದ್ರೋಣನು ಶಾಂತನಾಗಿ "ವತ್ಸ, ದುರ್ಯೋಧನ, ನಿನಗಿಂತ ನಾನು ದೊಡ್ಡವನಲ್ಲವೆ? ನಿನಗೆ ನೇಮಿಸುವಷ್ಟು ಸ್ವಾತಂತ್ರ್ಯವು ನನಗಿದೆಯಲ್ಲವೆ?" ಎಂದು ಕೇಳಿದನು.

ದ್ರೋಣನು ತನಗೆ ಮಾತ್ರವಲ್ಲ, ತನ್ನ ಕುಲಕ್ಕೇ ನಿಯಮಿಸತಕ್ಕ ಸ್ವಾಮಿಯೆಂದು ಕೌರವನು ಒಪ್ಪಿಕೊಂಡನು.

ದ್ರೋಣನು "ನಿನ್ನನ್ನು ವಂಚಿಸಿದರೆ ನಾನು ದೋಷಿಯಾಗುತ್ತೇನಲ್ಲವೆ? ನಿನ್ನ ಹಿತಕ್ಕಾಗಿಯೇ ನಾನು ಬಲವಂತಪಡಿಸುತ್ತೇನೆ. ಎರಡು ವಂಶಗಳಿಗೆ ಕಲಹವುಂಟಾದಾಗ ಧರ್ಮಾಧಿಕಾರಿಗಳು ಅವರನ್ನು ಸಮಾಧಾನಪಡಿಸಿದರೆ ಅದು ವೈರವನ್ನು ನಂದಿಸುತ್ತದೆಯಲ್ಲವೆ!" ಎಂದನು. ಆದ್ದರಿಂದಲೇ ತಾನು ಆ ವಿಚಾರವಾಗಿ ತನ್ನ ಮಾವ ಮೊದಲಾದವರೊಡನೆ ವಿಚಾರಿಸಬೇಕಾಗಿದೆಯೆಂದು ಕೌರವನು ಹೇಳಿದನು.

ತನ್ನ ಕೆಲಸವು ಕೆಟ್ಟಿತೆಂದು ದ್ರೋಣನಿಗೆ ಚಿಂತೆಯಾಯಿತು. ಏಕೆಂದರೆ ಗರ್ವಿಷ್ಠನೂ ಅಧರ್ಮಿಯೂ ಆದ ಶಕುನಿಯು ರಾಜ್ಯವನ್ನು ಕೊಡಿಸನೆಂಬುದು ಎಲ್ಲರಿಗೂ ತಿಳಿದ ವಿಷಯವೆ. ಅವನು ಯಾವ ವಿಷಯದಲ್ಲಿಯೂ ಸಿಕ್ಕನ್ನು ತಂದೊಡ್ಡದಿರನೆಂದು ದ್ರೋಣನಿಗೆ ಗೊತ್ತಿತ್ತು.

ಆದ್ದರಿಂದ ಶಕುನಿಯನ್ನು ಎದುರು ಹಾಕಿಕೊಂಡರೆ ಕಾರ್ಯವಾಗದೆಂದು ಅವನು ಯೋಚಿಸಿ "ವತ್ಸ, ಗಾಂಧಾರರಾಜ, ವೃದ್ಧಾಪ್ಯವು ಕೋಪಕ್ಕೆ ಆಸ್ಪದವೀಯುತ್ತದೆಯಲ್ಲವೆ! ನಾನು ಕೋಪದಿಂದ ಆಡಿದ ಮಾತನ್ನು ಕ್ಷಮಿಸಿಬಿಡು. ಆ ಕೋಪಶಾಂತಿಗಾಗಿ ಬಾ, ನಿನ್ನನ್ನು ಆಲಿಂಗಿಸುವೆನು" ಎಂದನು.

ಗುರುವಿನ ತಂತ್ರ ಶಕುನಿಗೆ ಗೊತ್ತಾಯಿತು. ಆಗಲಿ ಬರುವೆನೆಂದು ತಿಳಿಸಿ ಅವನು ಕೌರವ ಕರ್ಣರೊಡನೆ ಮಂತ್ರಾಲೋಚನೆಗೆ ಹೋದನು. ದ್ರೋಣನು ಪೆಚ್ಚಾದನು.

ದುರ್ಯೋಧನನು ಪಾಂಡವರಿಗೆ ರಾಜ್ಯವನ್ನು ಕೊಡುವುದರ ಬಗ್ಗೆ ಮಾವನ ಅಭಿಪ್ರಾಯವನ್ನು ಕೇಳಿದನು. ಶಕುನಿಯು ಕೊಡಕೂಡದೆಂದೇ ಹಟ ಹಿಡಿದನು.

ಆಮೇಲೆ ದುರ್ಯೋಧನನು ಕರ್ಣನನ್ನು ಕೇಳಲು ಅವನು "ಭ್ರಾತೃ ಸ್ನೇಹ ಎಂತಹುದೆನ್ನುವುದು ಶ್ರೀರಾಮನ ಚರಿತ್ರೆಯಿಂದ ತಿಳಿಯುವುದಿಲ್ಲವೆ ? ಪಾಂಡವರ ಮೇಲೆ ಕ್ಷಮೆ ತೋರುವುದು ನಿನ್ನ ಕೈಯಲ್ಲಿದೆ. ಯುದ್ಧ ಒದಗಿದರೆ ನಿನಗೆ ನೆರವಾಗುವುದು ನನ್ನ ಕರ್ತವ್ಯ" ಎಂದು ತನ್ನ ಅಭಿಪ್ರಾಯವನ್ನು ತಿಳಿಸಿದನು.

ದುರ್ಯೋಧನನಿಗೆ ಉಭಯ ಸಂಕಟ. ಗುರುವಿಗೆ ಮಾತು ಕೊಟ್ಟಾಗಿದೆ. ಅದನ್ನು ಉಳಿಸಿಕೊಳ್ಳಬೇಕು. ಆದ್ದರಿಂದ ಯಾವುದಾದರೂ ಶತ್ರುವಿನಿಂದ ಕೂಡಿ ನಿಷ್ಪ್ರಯೋಜಕನಾದ ಪ್ರಾಂತ್ಯವನ್ನು ಪಾಂಡವರಿಗೆ ಕೊಡಲು ಅವನು ಯೋಚಿಸಿದನು.

ಆದರೆ ಶಕುನಿಯು ಅದಕ್ಕೂ ಒಪ್ಪದೆ "ಅಂಥ ದೇಶವೆಲ್ಲಿದೆ ? ಪಾರ್ಥನಿಗಿಂತ ಬಲಶಾಲಿಗಳು ಯಾರಿದ್ದಾರೆ ? ಧರ್ಮಜನು ಕಾಲಿಟ್ಟ ಬಂಜರು ಭೂಮಿಯೂ ಸಸ್ಯಸಮೃದ್ಧಿಯಾಗುತ್ತದೆಯಲ್ಲವೆ !" ಎಂದು ಅಸಮ್ಮತಿಯನ್ನು ಸೂಚಿಸಿದನು.

ಕೌರವನು ವಚನಭ್ರಷ್ಟನಾಗದಂತೆಯೂ, ಪಾಂಡವರಿಗೆ ರಾಜ್ಯ ಸಿಗದಂತೆಯೂ ಮಾಡಲು ಒಂದು ಉಪಾಯವನ್ನು ಯೋಚಿಸಿ "ಆಚಾರ್ಯ, ಐದು ರಾತ್ರಿಗಳೊಳಗಾಗಿ ಪಾಂಡವರ ಸುದ್ದಿಯನ್ನು ತಿಳಿದು ಬಂದರೆ ದುರ್ಯೋಧನನು ಅವರಿಗೆ ರಾಜ್ಯವನ್ನು ಹಂಚಿಕೊಡುತ್ತಾನಂತೆ. ಆದ್ದರಿಂದ ಈಗಲೇ ಅವರನ್ನು ಹುಡುಕಿಕೊಂಡು ಬನ್ನಿ" ಎಂದು ಶಕುನಿಯು ದ್ರೋಣನಿಗೆ ಹೇಳಿದನು.

ನಿರಾಶೆ ಕ್ರೋಧಗಳಿಂದ "ಹೀಗೆ ವಂಚಿಸುವ ಬದಲು ದಾನವನ್ನು ಕೊಡಲಾರೆನೆಂದು ಸ್ಪಷ್ಟವಾಗಿ ಹೇಳಿಬಿಡಬಾರದೆ. ಹನ್ನೆರಡು ವರ್ಷಗಳಿಂದ ಪಾಂಡವರನ್ನು ಹುಡುಕಿದರೂ ಸಿಗಲಿಲ್ಲ. ಈಗ ಅವರನ್ನು ಐದು ರಾತ್ರಿಗಳೊಳಗಾಗಿ ಹುಡುಕಲು ಸಾಧ್ಯವೆ ?" ದ್ರೋಣನು ಹೇಳಿದನು.

ಭೀಷ್ಮನು "ಪಾಂಡವರು ಈಗ ಬರಲಿ, ನೂರು ವರ್ಷಕ್ಕೆ ಬರಲಿ. ಕೊಡಬೇಕಾದುದನ್ನು ಅವರಿಗೆ ಹಂಚಿಕೊಡುವೆನೆಂದು ದುರ್ಯೋಧನನು ಹೇಳಿದರೆ ಸಾಕು" ಎಂದು ಸೂಚಿಸಿದನು.

ಪಾಂಡವಪ್ರೇಮಿಯಾದ ದ್ರೋಣಾಚಾರ್ಯನಿಗೆ ಪಾಂಡವರನ್ನು ಹೇಗೆ ಪತ್ತೆಹಚ್ಚುವುದೆಂದು ಚಿಂತೆಯಾಯಿತು. ಸಮುದ್ರವನ್ನು ಹಾರಿ ಸೀತೆಯ ಸುದ್ದಿಯನ್ನು ತಂದು ರಾಮನಿಗೆ ತಿಳಿಸಿದ ಆಂಜನೇಯನ ವೇಗವು ತನಗೂ ಇರಬಾರದೆ ಎಂದು ಅವನು ಯೋಚಿಸುತ್ತಿದ್ದನು.

ಅಷ್ಟರಲ್ಲಿ ವಿರಾಟನಗರಿಗೆ ಹೋಗಿದ್ದ ದೂತನು ಬಂದು ವಿರಾಟನ ಹತ್ತಿರದ ನೆಂಟರಾದ ಕೀಚಕರೆಂಬ ನೂರು ಮಂದಿ ಸಹೋದರರನ್ನು ಯಾರೋ ರಾತ್ರಿಯ

ಹೊತ್ತಿನಲ್ಲಿ ಬರಿಯ ಬಾಹುಗಳಿಂದಲೇ ಕೊಂದರೆಂದೂ, ಆದ್ದರಿಂದಲೆ ವಿರಾಟನು ಯಾಗಕ್ಕೆ ಬರಲಿಲ್ಲವೆಂದೂ ವಿಜ್ಞಾಪಿಸಿದನು. ದುರ್ಯೋಧನಾದಿಯಾಗಿ ಸಭಿಕರೆಲ್ಲ ಆಶ್ಚರ್ಯಚಕಿತರಾದರು. ಕೀಚಕರನ್ನು ಕೊಂದ ಅನಾಮಧೇಯನಾದ ಆ ಅಸಹಾಯ ಶೂರನಾವನು ಎಂಬುದನ್ನು ಭೀಷ್ಮನು ಊಹಿಸಿದನು.

"ಇದು ಬಾಹುಶಾಲಿಯಾದ ಭೀಮನ ಕಾರ್ಯವೆನ್ನುವುದರಲ್ಲಿ ಸಂದೇಹವಿಲ್ಲ. ಕೌರವರ ಮೇಲಿನ ಕೋಪವನ್ನು ಅವರ ಮೇಲೆ ತೀರಿಸಿಕೊಂಡನು" ಎಂದು ದ್ರೋಣನಿಗೆ ಭೀಷ್ಮನು ಹೇಳಿದನು.

ದ್ರೋಣನಿಗೆ ಅದು ಸ್ಪಷ್ಟವಾಗಿ ಗೊತ್ತಾಗದಿದ್ದುದರಿಂದ "ಕರುಗಳು ಬಾಲ್ಯ ಸಹಜವಾದ ಚಪಲತೆಯಿಂದ ನದಿಯ ದಡದಲ್ಲಿ ಕೊಂಬಿನಿಂದ ಅಗೆದಿದ್ದರೆ ದೊಡ್ಡ ಗೂಳಿಗಳು ಅದನ್ನು ಅರಿತುಕೊಳ್ಳಲಾರವೆ!" ಎಂದು ಭೀಷ್ಮನು ಇಂಗಿತವಾಗಿ ಸೂಚಿಸಿದನು.

ದ್ರೋಣನು ಪಂಚರಾತ್ರದ ಗಡುವಿಗೆ ಒಪ್ಪಿಕೊಂಡನು. ಅದಕ್ಕೆ ದುರ್ಯೋಧನನೂ ಆಗಬಹುದೆಂದನು. ಇದರ ಸುಳಿವೆಲ್ಲಾದರೂ ದುರ್ಯೋಧನನಿಗೆ ಗೊತ್ತಾಗಿಬಿಟ್ಟರೆ ಅವನು ತನ್ನ ಮಾತಿಗೆ ತಪ್ಪದಿರನೆಂಬ ಸಂಶಯ ಭೀಷ್ಮನನ್ನು ಬಾಧಿಸುತ್ತಿತ್ತು. ಅವನು ಪಾಂಡವರನ್ನು ಬಯಲಿಗೆಳೆಯುವ ಉಪಾಯವನ್ನು ಯೋಚಿಸಿ ವಿರಾಟನೊಡನೆ ತನಗೆ ವೈರವಿರುವುದರಿಂದ ಅವನು ಯಾಗಕ್ಕೆ ಉದ್ದೇಶಪೂರ್ವಕವಾಗಿ ಬರಲಿಲ್ಲವೆಂದೂ ಆದ್ದರಿಂದ ಅವನ ಗೋವುಗಳನ್ನೇಕೆ ಹಿಡಿಯಬಾರದೆಂದೂ ದುರ್ಯೋಧನನಿಗೆ ಸೂಚಿಸಿದನು.

ವಿರಾಟನು ಭೀಷ್ಮನ ಪ್ರಿಯಶಿಷ್ಯನಾಗಿದ್ದನು. ಅಂಥವನ ಮೇಲೆ ಭೀಷ್ಮನಿಗೆ ವೈರವೇಕೆಂದು ದ್ರೋಣನಿಗೆ ಆಶ್ಚರ್ಯವಾಯಿತು. ತಮ್ಮ ರಥದ ಧ್ವನಿಯನ್ನು ಕೇಳಿ ವಿರಾಟನಿಗೆ ಕೃತಜ್ಞರಾದ ಪಾಂಡವರು ತಮ್ಮೊಡನೆ ಯುದ್ಧಕ್ಕೆ ಬರುವರೆಂದು ಭೀಷ್ಮನು ದ್ರೋಣನಿಗೆ ಮೆಲ್ಲಗೆ ವಿವರಿಸಿದ ಮೇಲೆ ದ್ರೋಣನಿಗೆ ಸಂತೋಷವಾಯಿತು. ತಾತನ ಸಲಹೆ ದುರ್ಯೋಧನನಿಗೂ ಒಪ್ಪಿಗೆಯಾಯಿತು.

ಯಾಗ ಮುಗಿದ ಮೇಲೆ ಹಸ್ತಿನಾವತಿಗೆ ಹೋಗಲು ಸಿದ್ಧವಾಗಿದ್ದ ಸೈನ್ಯದೊಡನೆ ಅಲ್ಲಿಂದಲೇ ವಿರಾಟನಗರಿಗೆ ಅವರು ಪ್ರಯಾಣ ಮಾಡಿದರು. ಯಜ್ಞಕಾಲದಲ್ಲಿ ಶಾಂತವಾಗಿದ್ದ ತನ್ನ ಗದೆಯನ್ನು ಮತ್ತೆ ಹಿಡಿಯಬೇಕಾಯಿತೆಂದುಕೊಂಡು ಕೌರವನು ಯುದ್ಧಸನ್ನದ್ಧನಾದನು.

ಸುಯೋಧನನ ರಣಕೌಶಲವನ್ನು ನೋಡಲು ಭೀಷ್ಮ ದ್ರೋಣರು ಆಶಿಸಿ ಅವರೂ ಕೂಡ ಜೊತೆಯಲ್ಲಿ ಹೊರಟರು. ಅಂದಿನ ಗೋಗ್ರಹಣದಲ್ಲಿ ಶಕುನಿಯ ರಥವೇ ಮುಂದಾಗಿತ್ತು.

ಅಂದು ವಿರಾಟರಾಜನ ವರ್ಧಂತಿ. ಅದನ್ನು ವಿಜೃಂಭಣೆಯಿಂದ ಆಚರಿಸಲು ಸಿದ್ಧತೆಗಳಾಗಿದ್ದುವು. ನಗರದ ಗೊಲ್ಲಗೊಲ್ಲತಿಯರೆಲ್ಲ ಒಳ್ಳೆಯ ಬಟ್ಟೆಯುಟ್ಟು ಸಿಂಗರಿಸಿಕೊಂಡು ನಗರದ ಹೊರಬಯಲಿನಲ್ಲಿ ತಮ್ಮ ತಮ್ಮ ಗೋವುಗಳೊಡನೆ ನೆರೆದಿದ್ದರು.

ರಾಜನು ಬ್ರಾಹ್ಮಣರಿಗೆ ಗೋದಾನ ಕೊಡುವವನಿದ್ದನು. ಗೋವುಗಳನ್ನು ಅಟ್ಟಿಕೊಂಡು ಗೊಲ್ಲರು ದಾನ ಕೊಡುವ ಸಮಯಕ್ಕೆ ಗೊತ್ತುಪಡಿಸಿದ್ದ ಒಂದು ತೋಟಕ್ಕೆ ಹೋಗಬೇಕಾಗಿತ್ತು. ಅಲ್ಲಿಗೆ ಹೋಗುವವರೆಗೆ-ಅವರು ಹಾಡುತ್ತ ಕುಣಿಯುತ್ತ ಬಯಲಿನಲ್ಲಿ ವಿನೋದಪಡುತ್ತಿದ್ದರು.

ಅಷ್ಟರಲ್ಲಿ ಕೌರವ ಸಾರ್ವಭೌಮನ ಸೇನೆಯ ಪದಾಘಾತದಿಂದ ಧೂಳು ನಭೋಮಂಡಲವನ್ನು ಮುಚ್ಚಿತು. ಅದನ್ನು ಕಂಡು ತುರುಗಾಹಿಗಳಿಗೆ ದಿಗಿಲಾಯಿತು. ಸೈನ್ಯವು ವೇಗದಿಂದ ಬಂದು ಅಲ್ಲಿ ಮೇಯುತ್ತಿದ್ದ ಗೋಸಮೂಹವನ್ನು ಸುತ್ತುಗಟ್ಟಿ ಸೆರೆಹಿಡಿಯಿತು.

ಗೊಲ್ಲರು ಹಾಹಾಕಾರ ಮಾಡುತ್ತ ಭಯದಿಂದ ಜೀವರಕ್ಷಣೆಗಾಗಿ ಪಲಾಯನ ಮಾಡಿದರು. ದಿಗ್ಭ್ರಾಂತವಾದ ಹಸುಕರುಗಳ ಅಂಬಾ ಆರ್ತನಾದವು ಕರುಣಾಜನಕವಾಗಿತ್ತು.

ವಿರಾಟೇಶ್ವರನು ವರ್ಧಂತಿ ಸಂಬಂಧವಾದ ಮಂಗಳಕಾರ್ಯಗಳನ್ನು ಮಾಡುತ್ತಾ ಅರಮನೆಯಲ್ಲಿಯೇ ಇದ್ದನು. ಗೋಗ್ರಹಣದ ಸುದ್ದಿಯು ಅವನಿಗೆ ತಿಳಿದಾಗ ತಾನಿದ್ದು ಪ್ರಯೋಜನವೇನೆಂದು ವ್ಯಥೆಪಟ್ಟು ಯುದ್ಧಕ್ಕೆ ಹೊರಡಲು ನಿಶ್ಚಯಿಸಿ ತನ್ನ ರಥ ಆಯುಧಗಳನ್ನು ಸಿದ್ಧಪಡಿಸಿ ತರಲು ಸೂತನಿಗೆ ಆಜ್ಞೆಯಿತ್ತನು. ದುರ್ಯೋಧನನು ಮಾಡಿದ ಯಾಗಕ್ಕೆ ತಾನು ಹೋಗದಿದ್ದುದರಿಂದ ಅವನು ತನ್ನ ಗೋಧನವನ್ನು ಹಿಡಿದಿರಬೇಕೆಂದುಕೊಂಡು ಹಸ್ತಿನಾವತಿಯಲ್ಲಿ ಬಹುಕಾಲವಿದ್ದು ದುರ್ಯೋಧನನ ಸ್ವಭಾವವನ್ನು ತಿಳಿದಿದ್ದ ತನ್ನ ಆಸ್ಥಾನದ ಯತಿ ಭಗವಂತನನ್ನು ಅವನು ಕರೆಸಿದನು. ಯತಿ ವೇಷಧಾರಿಯಾದ ಧರ್ಮರಾಯನು ರಾಜನ ಯುದ್ಧಸನ್ನಾಹವನ್ನು ಕಂಡು ಚಪಲರಾದ ತಮ್ಮಂದಿರು ಎಲ್ಲಿ ಹೊರಬೀಳುವರೊ ಎಂದು ಶಂಕಿಸುತ್ತಾ ವಿರಾಟನ ಬಳಿಗೆ ಬಂದನು. ಅವನಿಗೆ ವಿರಾಟನು ಕೌರವರು ತನ್ನ

ಕುಮಾರನು ವಣಿವಾರಿಸಿಕೊಂಡು ಶತ್ರುಗಳನ್ನು ಭೇದಿಸುತ್ತ ಮುನ್ನುಗ್ಗಿ ಅಂಬಿನ ಮಳೆಗರೆದು ಅವರಲ್ಲಿ ಶತ್ರುಗಳನ್ನು ಮುಚ್ಚಿ ಬಿಟ್ಟನೆಂದು ಹೇಳಿದನು. ಹಿಂದೆ ಅಗ್ನಿಯು ಅರ್ಜುನನಿಗೆ ಕೊಟ್ಟಿದ್ದ ಅಕ್ಷಯತೂಣೀರದ ಮಹಿಮೆಯಿಂದ ಹಾಗೆ ಶರವರ್ಷವುಂಟಾಯಿತೆಂದು ಭಗವಂತನು ತನ್ನಲ್ಲೇ ಅಂದುಕೊಂಡನು.

ಮತ್ತೆ ಭಟನು ಹೀಗೆ ಹೇಳಿದನು—"ಬಿಲ್ಲಿನ ಶಬ್ದವನ್ನು ಕೇಳುತ್ತಿದ್ದಂತೆ ದ್ರೋಣನು ಅದೇ ಇದು ಎಂದು ಹಿಂದಿರುಗಿದನಂತೆ. ತನ್ನ ರಥದ ಬಾವುಟದಲ್ಲಿ ನೆಟ್ಟ ಬಾಣವೊಂದನ್ನು ನೋಡಿ ಭೀಷ್ಮನು ಸುಮ್ಮನಾದನಂತೆ. ಕರ್ಣನು ಗಾಯಪಟ್ಟನಂತೆ. ಉಳಿದ ರಾಜರೆಲ್ಲರು ಹೆದರಿರಲು ಅಭಿಮನ್ಯುವೊಬ್ಬನು ಮಾತ್ರ ಹೋರಾಡುತ್ತಿದ್ದಾನಂತೆ."

ಅರ್ಜುನನು ಅಭಿಮನ್ಯುವಿನೊಡನೆ ಯುದ್ಧಮಾಡಲು ಅನುಮಾನಿಸಬಹುದೆಂದು ಭಗವಂತನು ಯೋಚಿಸಿದನು. ಆದ್ದರಿಂದ ಅವನು ಬೃಹನ್ನಳೆಯ ಸಹಾಯಕ್ಕೆ ಮತ್ತೊಬ್ಬ ಸಾರಥಿಯನ್ನು ಕಳುಹಿಸಲು ರಾಜನಿಗೆ ಹೇಳಿದನು.

ವಿರಾಟನಿಗಾದರೊ ಮಗನ ಪರಾಕ್ರಮದಲ್ಲಿ ಅಪಾರ ನಂಬಿಕೆ. ಆದುದರಿಂದ ಭೀಷ್ಮ ದ್ರೋಣರಂಥ ಮಹಾ ಪರಾಕ್ರಮಿಗಳನ್ನೇ ಪರಾಭವಗೊಳಿಸಿದ ತನ್ನ ಕುಮಾರನಿಗೆ ಅಭಿಮನ್ಯು ಅಸಾಧ್ಯನಲ್ಲವೆಂದು ಅವನಿಗೆ ವಿಶ್ವಾಸವುಂಟಾಗಿತ್ತು. ಮುಂದಿನ ವಾರ್ತೆಯನ್ನು ತಿಳಿದು ಬರಲು ಹೋದ ಭಟನು ಮತ್ತೆ ಬಂದು ಗೋಗ್ರಹಣವು ವಿಫಲವಾಗಿ ಕೌರವರು ಪಲಾಯನ ಮಾಡಿದರೆಂದು ರಾಜನಿಗೆ ಪ್ರಿಯವಾರ್ತೆಯನ್ನು ಬಿನ್ನವಿಸಿದನು.

ಮಗನ ವಿಜಯವನ್ನು ಕೇಳಿ ವಿರಾಟನಿಗೆ ಮಹದಾನಂದವಾಯಿತು. ರಣಭೂಮಿಯಿಂದ ಮರಳಿದ ಮೇಲೆ ಬೃಹನ್ನಳೆ ಅಂತಃಪುರಕ್ಕೆ ಹೋಗಿದ್ದಳು. ಅವಳನ್ನು ಕರೆತರಲು ರಾಜನು ಆಜ್ಞೆ ಮಾಡಿದನು.

ಬೃಹನ್ನಳಾವೇಷಧಾರಿಯಾದ ಅರ್ಜುನನು ತನ್ನ ಸ್ತ್ರೀ ವೇಷವನ್ನು ನೋಡಿಕೊಂಡು ಆ ವೇಷದಿಂದ ಅಸ್ತ್ರಾಭ್ಯಾಸವು ತಪ್ಪಿಹೋಗಿದ್ದ ತನ್ನ ಕೈಗಳು ಹೇಗೆ ಮುಹೂರ್ತಕಾಲ ಶರ ಸಂಧಾನದಲ್ಲಿ ತಡವರಿಸಿದುವೆಂದುಕೊಳ್ಳುತ್ತ ಲಜ್ಜೆಯಿಂದ ಆಸ್ಥಾನಕ್ಕೆ ಬಂದು ಯತಿ ಮತ್ತು ರಾಜನಿಗೆ ನಮಸ್ಕರಿಸಿದನು. ಯುದ್ಧದಲ್ಲಿ ಗೆದ್ದಿದ್ದರೂ ದುಶ್ಶಾಸನನನ್ನು ಹಿಡಿದು ತರಲಾಗಲಿಲ್ಲವೆಂದು ಬೃಹನ್ನಳೆಗೆ ವ್ಯಸನವಾಗಿತ್ತು.

ವಿರಾಟನು "ಯೋಗ್ಯತೆಗೆ ವಯಸ್ಸು ಕುಲಗಳು ಕಾರಣವಲ್ಲ. ಉತ್ತಮರಾಗಲಿ ಅಧಮರಾಗಲಿ ತಮ್ಮ ಕಾರ್ಯದಿಂದ ಶ್ರೇಷ್ಠರಾಗುವರು. ನಿನ್ನ ಈ ನಪುಂಸಕ ಮಹಾತ್ಮನನ್ನು ಕಂಡು ಈಗ ನನಗೆ ಅಪೂರ್ವ ಗೌರವವುಂಟಾಗಿದೆ" ಎಂದು ಶ್ಲಾಘಿಸಿ ಯುದ್ಧದ ವಿವರವನ್ನು ತಿಳಿಸಲು ಬೃಹನ್ನಳೆಗೆ ಆಜ್ಞೆ ಮಾಡಿದನು. ಆ ಸಮಯಕ್ಕೆ ಭಟನು ಬಂದು ಅಭಿಮನ್ಯುವು ಸೆರೆಯಾದನೆಂದು ತಿಳಿಸಿದನು.

ಅಭಿಮನ್ಯುವನ್ನು ಯಾರು ಸೆರೆಹಿಡಿದರೆಂದು ಅರ್ಜುನನಿಗೆ ಆಶ್ಚರ್ಯವಾಯಿತು. ಅಭಿಮನ್ಯುವಿನ ರಣಕೌಶಲವನ್ನು ಅವನು ಕಣ್ಣಾರೆ ಕಂಡಿದ್ದನು. ಆದ್ದರಿಂದ ಅವನು "ಬಲಶಾಲಿಯೂ ಸುಶಿಕ್ಷಿತನೂ ಆದ ಅಭಿಮನ್ಯುವನ್ನು ಗೆಲ್ಲುವ ಸಮರ್ಥರನ್ನು ನಾನು ಕಾಣೆ. ಅವನ ತಂದೆಯರ ದೌರ್ಭಾಗ್ಯದಿಂದ ಅವನಿಗೆ ಈ ಗತಿಯಾಯಿತು" ಎಂದು ರಾಜನಿಗೆ ಹೇಳಿದನು. ಭಟನು ಅಡುಗೆಯ ಮನೆಯ ಮುಖ್ಯಸ್ಥನು ಅಭಿಮನ್ಯುವನ್ನು ಸೆರೆಹಿಡಿದನೆಂದು ತಿಳಿಸಿದನು.

ವಿರಾಟನು ಅಭಿಮನ್ಯುವನ್ನು ಕರೆಸಿ ಸತ್ಕರಿಸಬೇಕೆಂದು ಯೋಚಿಸುತ್ತಿದ್ದನು. ಅವನಿಗೆ ಭಗವಂತನು "ನೀನು ಅಭಿಮನ್ಯುವನ್ನು ಪುರಸ್ಕರಿಸಿದರೆ ಅವನಿಗೆ ಭಯಪಟ್ಟಂತೆ ಜನರು ಭಾವಿಸುವುದರಿಂದ ಅವನನ್ನು ಸತ್ಕರಿಸುವುದು ಬೇಡ" ಎಂದನು.

ಅದಕ್ಕೆ ರಾಜನು "ಅವನು ಪಾಂಡವರ ಮಗ. ನನ್ನ ಮಗನ ಓರಗೆಯವನು. ಅಲ್ಲದೆ ಮೃಪನ ಮೊಮ್ಮಗನಾದುದರಿಂದ ನನಗೂ ಮೊಮ್ಮಗನಾದಂತೆ. ಮತ್ತು ಕನ್ಯೆಯ ತಂದೆಯಾದ ನನಗೆ ಅವನು ಅಳಿಯನಾಗತಕ್ಕವನು. ಅವನನ್ನು ಸತ್ಕರಿಸುವುದೇ ನ್ಯಾಯ" ಎಂದು ಹೇಳಿದನು. ಭಗವಂತನ ಸಲಹೆಯಂತೆ ಅಭಿಮನ್ಯುವನ್ನು ಕರೆತರಲು ಬೃಹನ್ನಳೆಯೇ ಹೋದಳು.

ಎಷ್ಟೋ ವರ್ಷಗಳಾದ ಮೇಲೆ ಮಗನನ್ನು ಕಾಣುವ ಸುಯೋಗವು ಅರ್ಜುನನಿಗೆ ಲಭಿಸಿದುದರಿಂದ ಧರ್ಮರಾಜನಿಗೆ ಸಂತೋಷವಾಯಿತು. ಅರಗಿನ ಮನೆಯಿಂದ ತನ್ನ ತಾಯಿ ಸಹೋದರರನ್ನು ಹೆಗಲಮೇಲೆ ಕೂರಿಸಿಕೊಂಡು ತಂದುದಕ್ಕೆ, ಅಭಿಮನ್ಯುವನ್ನು ರಣಭೂಮಿಯಿಂದ ತೋಳುಗಳಿಂದೆತ್ತಿ ತಂದುದು ಸಮವಾಯಿತೆಂದುಕೊಳ್ಳುತ್ತ ಭೀಮನು ಅಭಿಮನ್ಯುವಿದ್ದ ಸ್ಥಳಕ್ಕೆ ಬಂದನು.

ತನ್ನನ್ನು ನಿರಾಯಾಸವಾಗಿ ತೋಳುಗಳಿಂದ ಎತ್ತಿ ತಂದ ಭೀಮನ ಮಹೋನ್ನತ ಧೀರಾಕೃತಿ, ವಜ್ರಸಮಾನವಾದ ದೇಹವನ್ನು ಕಂಡು ಅವನು ಯಾರಾಗಿರಬಹುದೆಂದು ಅಭಿಮನ್ಯುವಿಗೆ ಅಚ್ಚರಿಯಾಯಿತು. ಅಭಿಮನ್ಯುವನ್ನು ಆಸ್ಥಾನಕ್ಕೆ

ಕರೆದುಕೊಂಡು ಹೋಗಲು ಮತ್ತೊಂದು ಕಡೆಯಿಂದ ಬೃಹನ್ನಳೆಯೂ ಆಗ ಅಲ್ಲಿಗೆ ಬಂದಳು.

ಋಮಾವೇಷದ ಹರನಂತಿದ್ದ ಬೃಹನ್ನಳೆಯನ್ನು ಕಂಡು ಅಭಿಮನ್ಯುವಿಗೆ ಮತ್ತೂ ಆಶ್ಚರ್ಯವಾಯಿತು.

ಭೀಮನನ್ನು ಕುರಿತು "ಕುಮಾರನನ್ನು ಇಲ್ಲಿಗೇಕೆ ಕರೆತಂದೆ? ಅವನು ಪ್ರಥಮ ಯುದ್ಧದಲ್ಲಿಯೆ ಸೋತಂತಾಯಿತು. ಇದರಿಂದ ಸುಭದ್ರೆ ದುಃಖಿಸುವಳು. ಕೃಷ್ಣ ಕೋಪಿಸಿಕೊಳ್ಳುವನು" ಎಂದು ಅರ್ಜುನನು ಆಕ್ಷೇಪಿಸಿದನು.

"ವೈರಿಗಳೊಡನಿದ್ದ ಕುಮಾರನನ್ನು ನೋಡಿ ನನಗೆ ತಡೆಯಲಾರದೆ ಹೋಯಿತು. ಆದ್ದರಿಂದ ದುಃಖಾರ್ತಳಾದ ದ್ರೌಪದಿಯೂ ಮಗನನ್ನು ನೋಡಲೆಂದು ಕರೆತಂದೆ" ಎಂದು ಅರ್ಜುನನಿಗೆ ಭೀಮನು ನೊಂದು ನುಡಿದನು.

ಅಭಿಮನ್ಯುವನ್ನು ಕೆಣಕಿ ರೇಗಿಸಬೇಕೆಂದು ಅರ್ಜುನನಿಗೆ ಆಸೆಯಾಯಿತು. ಆದ್ದರಿಂದ ಅವನನ್ನು ಮಾತನಾಡಿಸಲು ಭೀಮನಿಗೆ ಹೇಳಿದನು.

ಭೀಮನು "ಅಭಿಮನ್ಯು" ಎಂದು ಅವನನ್ನು ಸಂಬೋಧಿಸಿದನು. ತನ್ನನ್ನು ಹೆಸರು ಹಿಡಿದು ಕೂಗಿದನೆಂದು ಅಭಿಮನ್ಯುವು ಕೋಪಿಸಿಕೊಂಡನು.

ಆಗ ಅರ್ಜುನನೇ "ಅಭಿಮನ್ಯು" ಎಂದು ಕರೆದನು.

ಅಭಿಮನ್ಯು ಅವನನ್ನು ತಿರಸ್ಕಾರದಿಂದ ನೋಡಿ "ಏನೇನು? ಅಭಿಮನ್ಯುವೊ! ಕ್ಷತ್ರಿಯರನ್ನು ಹೆಸರು ಹಿಡಿದು ಕೂಗುವುದು ಈ ಊರಿನ ನಡತೆಯೋ ಅಥವಾ ಇವನು ಚಿಕ್ಕವನು, ಸೆರೆಯಾದನೆಂದು ಹೀಗೆ ನನ್ನನ್ನು ಅಪಮಾನ ಮಾಡುವಿರೋ" ಎಂದು ಗದರಿಸಿದನು.

ಮಗನ ವೀರನುಡಿಗಳನ್ನು ಕೇಳಿ ಅರ್ಜುನನಿಗೆ ಅವನನ್ನು ಇನ್ನಷ್ಟು ರೇಗಿಸಲು ಮನಸ್ಸಾಯಿತು. "ಅಭಿಮನ್ಯು, ನಿನ್ನ ತಾಯಿ ಕ್ಷೇಮವಾಗಿರುವಳೆ?" ನಗುತ್ತಾ ಬೃಹನ್ನಳೆ ಕೇಳಿದಳು.

ಅಭಿಮನ್ಯುವಿನ ರೋಷ ತುದಿಮುಟ್ಟಿತು. ಬೃಹನ್ನಳೆಯನ್ನು ಕ್ರೂರವಾಗಿ ನೋಡುತ್ತಾ "ಏನು, ಏನು? ನನ್ನ ತಾಯಿಯೆ? ಹೆಂಗಸರ ಕ್ಷೇಮವನ್ನು ಕೇಳುವುದಕ್ಕೆ ನೀನೇನು ಧರ್ಮರಾಯನೊ, ಭೀಮಸೇನನೊ ಅಥವಾ ಅರ್ಜುನನೊ?" ಎಂದು ಗುಡುಗಾಡಿದನು.

ಬೃಹನ್ನಳೆ ಅವನ ಮಾತನ್ನು ಮನಸ್ಸಿಗೆ ಹಾಕಿಕೊಳ್ಳದೆ ಮತ್ತೆ ಕೇಳಿದಳು—
"ಅಭಿಮನ್ಯು, ಅದಿರಲಿ. ಕೃಷ್ಣ ಕುಶಲವೆ?"
ತನ್ನನ್ನು ಮಾತ್ರವಲ್ಲ ತನ್ನ ಸೋದರಮಾವನನ್ನೂ ಹೆಸರು ಹಿಡಿದು ಕರೆದನೆಂದು ಅಭಿಮನ್ಯುವಿಗೆ ದುಃಖವಾಯಿತು. ಅವನನ್ನು ನೋಡಿ ಭೀಮಾರ್ಜುನರು ಒಬ್ಬರನ್ನೊಬ್ಬರು ನೋಡಿಕೊಂಡು ನಗುತ್ತಿದ್ದರು.
"ಏನು ನನ್ನನ್ನು ಪರಿಹಾಸ ಮಾಡುವಿರ?" ಅಭಿಮನ್ಯು ಸಿಟ್ಟಿನಿಂದ ಕೇಳಿದನು.
"ಇಲ್ಲ. ನಿನ್ನ ತಂದೆಯಾದರೋ ಅರ್ಜುನ. ನಿನ್ನ ಮಾವ ಕೃಷ್ಣ. ನೀನಾದರೋ ಶಸ್ತ್ರಾಸ್ತ್ರನಿಪುಣನಾದ ವೀರ ತರುಣ. ಆದರೂ ಸೋತೆಯಲ್ಲ!" ಬೃಹನ್ನಳೆ ನಸುನಗುತ್ತ ಕೇಳಿದಳು.
"ಸಾಕು. ನಿನ್ನ ಹರಟೆ. ಆತ್ಮಸ್ತುತಿ ಮಾಡಿಕೊಳ್ಳುವುದು ನಮ್ಮ ಕುಲಕ್ಕೆ ಬಂದಿಲ್ಲ. ಯುದ್ಧದಲ್ಲಿ ಸತ್ತವರು ನನ್ನ ಬಾಣದಿಂದಲೇ ಸತ್ತಿದ್ದಾರೆಯೇ ಇಲ್ಲವೇ ಪರೀಕ್ಷಿಸಿ ನೋಡು" ಎಂದು ಅಸಹನೆಯಿಂದ ಅಭಿಮನ್ಯು ಉತ್ತರಿಸಿದನು.
"ಹಾಗಾದರೆ ಸಾಧಾರಣ ಕಾಲಾಳಿಗೆ ನೀನು ಹೇಗೆ ಸೆರೆಸಿಕ್ಕಿದೆ?" ಬೃಹನ್ನಳೆ ಪ್ರಶ್ನಿಸಿದಳು.
"ಅವನು ಬರಿಗೈಯಲ್ಲಿ ಬಂದು ನನ್ನನ್ನು ಹಿಡಿದನು. ಅರ್ಜುನನ ಮಗನಾದ ನಾನು ನಿರಾಯುಧನನ್ನು ಕೊಲ್ಲುವುದೆ? ಆದ್ದರಿಂದ ಸೆರೆಯಾದೆ".

ಆಮೇಲೆ ಬೃಹನ್ನಳೆಯು ಅಭಿಮನ್ಯುವಿಗೆ ಮಹಾರಾಜನ ಆಜ್ಞೆಯಾಗಿದೆ. ಆಸ್ಥಾನಕ್ಕೆ ಬರಬೇಕೆನ್ನಲು "ಮಹಾರಾಜನಂತೆ ಮಹಾರಾಜ! ಯಾರಿಗೆ ಮಹಾರಾಜ" ಎಂದು ಅವನನ್ನು ಧಿಕ್ಕರಿಸಿಬಿಟ್ಟನು. ಆಸ್ಥಾನದಲ್ಲಿ ಬ್ರಾಹ್ಮಣನು ಇರುವನೆಂದು ಬೃಹನ್ನಳೆಯು ಹೇಳಿದಮೇಲೆ ಅಭಿಮನ್ಯು ಅವನನ್ನು ಹಿಂಬಾಲಿಸಿ ಆಸ್ಥಾನಕ್ಕೆ ಹೋದನು.
ಅಭಿಮನ್ಯುವು ಭಗವಂತನೊಬ್ಬನಿಗೆ ಮಾತ್ರ ನಮಸ್ಕರಿಸಿದನು. ಭಗವಂತನು "ನಿನ್ನ ತಂದೆಯಂತೆ ಧೈರ್ಯ, ಶೌರ್ಯ, ಸಾಹಸ, ನಿತ್ಯಜಯಗಳನ್ನು ನೀನು ಪಡೆ" ಎಂದು ಆಶೀರ್ವದಿಸಿದನು.

ವಿರಾಟನು ಅಭಿಮನ್ಯುವನ್ನು ಮಾತನಾಡಿಸಿದರೂ ಅವನು ಮಾತನಾಡಲಿಲ್ಲ. ಅವನಿಗೆ ನಮಸ್ಕರಿಸಲೂ ಇಲ್ಲ. ಅವನ ದರ್ಪವನ್ನು ಮುರಿಯಬೇಕೆಂದುಕೊಂಡು ವಿರಾಟನು "ಇವನನ್ನು ಹಿಡಿದು ತಂದವರು ಯಾರು?" ಎಂದು ಕೇಳಿದನು.

ಭೀಮನು ಮುಂದೆ ಬಂದು "ಮಹಾರಾಜಾ, ನಾನು" ಎಂದನು. ಕೂಡಲೇ ಅಭಿಮನ್ಯುವು "ನಿರಾಯುಧನಾಗಿ ಎಂದು ಹೇಳು" ಎಂದನು.

"ಹಾಗಲ್ಲ. ಕುಮಾರ, ಇದೋ ನೋಡು. ನನ್ನ ಈ ಬಾಹುಗಳೇ ನನ್ನ ಸಹಜವಾದ ಆಯುಧಗಳು. ಇವುಗಳಿಂದಲೇ ನಾನು ಯುದ್ಧ ಮಾಡುವುದು. ಧನುಸ್ಸು ಹಿಡಿಯುವವರು ಹೇಡಿಗಳಲ್ಲವೆ!" ಭೀಮ ಉತ್ತರಿಸಿದನು, ತನ್ನ ಬಾಹುಗಳನ್ನು ಮೇಲೆತ್ತಿ ದರ್ಪದಿಂದ ತೋರಿ.

"ಸಾಕು ಸಾಕು. ಅಷ್ಟು ಬಾಹುಬಲವಿರಬೇಕಾದರೆ ನೀನೇನು ನನ್ನ ದೊಡ್ಡಪ್ಪನೆ?" ಅಭಿಮನ್ಯುವು ವ್ಯಂಗ್ಯವಾಗಿ ನುಡಿದನು.

ಭಗವಂತನು ಅಭಿಮನ್ಯುವನ್ನು ಅವನ ದೊಡ್ಡಪ್ಪನು ಯಾರೆಂದು ಕೇಳಲು "ಯಾರು ಯಮಪಾಶಕ್ಕೆ ಸಮನಾದ ತನ್ನ ಭುಜಪಂಜರದಿಂದ ಜರಾಸಂಧನನ್ನು ಕೊಂದನೊ ಆ ಮಹಾವೀರನೇ ನನ್ನ ದೊಡ್ಡಪ್ಪ" ಎಂದು ಅಭಿಮನ್ಯುವು ಉತ್ತರಿಸಿದನು.

ತನ್ನನ್ನು ಗೌರವಿಸದಿದ್ದರೂ ವಿರಾಟನಿಗೆ ಅಭಿಮನ್ಯುವಿನ ಮಾತುಗಳನ್ನು ಕೇಳಿ ಸಂತೋಷವಾಯಿತು.

"ನಿನ್ನ ರೋಷವಾಕ್ಯ ಕೇಳಿ ನನಗೆ ಸಂತೋಷವಾಗುತ್ತಿದೆ. ಹಾಗಾದರೆ ನಿನ್ನನ್ನು ಹೇಗೆ ಉಪಚರಿಸಲಿ" ವಿರಾಟನು ಅಭಿಮನ್ಯುವನ್ನು ಕೇಳಿದನು.

"ಸೆರೆಯಾದವನಿಗೆ ಯಾವುದು ಉಚಿತವೊ ಅದನ್ನು ನನಗೂ ಮಾಡಿ. ಭುಜದಿಂದ ಅವನು ಹೇಗೆ ನನ್ನನ್ನು ಎತ್ತಿ ತಂದನೊ ಹಾಗೆಯೇ ವೀರ ಭೀಮನು ತನ್ನ ಭುಜದಿಂದಲೇ ಇಲ್ಲಿಂದ ನನ್ನನ್ನು ಎತ್ತಿಕೊಂಡು ಹೋಗಲಿ" ದೃಢವಾಣಿಯಿಂದ ಅಭಿಮನ್ಯುವು ಉತ್ತರಿಸಿದನು.

ಅಷ್ಟರಲ್ಲಿ ಉತ್ತರಕುಮಾರನು ಆಸ್ಥಾನಕ್ಕೆ ಬಂದನು. ಅಂದಿನ ಯುದ್ಧದಲ್ಲಿ ಶತ್ರುಗಳನ್ನು ಉತ್ತರನೇ ಜಯಿಸಿದನೆಂದು ನಂಬಿ ಅರಮನೆಯವರಾಡಿದ ಹೊಗಳಿಕೆಯ ಮಾತು ಅವನಿಗೆ ನಾಚಿಕೆಯನ್ನು ತಂದಿತ್ತು. ಅವನು ನಿಜ ಹೇಳಿದರೂ ಯಾರೂ ನಂಬಲಿಲ್ಲ. ಆದ್ದರಿಂದ ವಿಧಿಯಿಲ್ಲದೆ ಮಿಥ್ಯಾಸ್ತುತಿಯನ್ನು ಕೇಳಿ ಅವನಿಗೆ ಅಸಮಾಧಾನವಾಗಿತ್ತು.

ವಿಜಯಿಯಾಗಿ ಬಂದ ಮಗನನ್ನು ನೋಡಿ ರಾಜನಿಗೆ ಎದೆಯುಬ್ಬಿತು. ಪ್ರೀತಿಯಿಂದ "ಕುಮಾರ, ಯುದ್ಧದಲ್ಲಿ ಸಾಹಸತೋರಿದ ಎಲ್ಲರಿಗೂ ಬಹುಮಾನವನ್ನು ಕೊಟ್ಟು ಸತ್ಕರಿಸಿದೆಯ?" ಎಂದು ವಿರಾಟನು ಪ್ರಶ್ನಿಸಿದನು.

ಉತ್ತರನು "ಎಲ್ಲರಿಗಿಂತ ಅಧಿಕ ವೀರನಾದ ಈತನನ್ನು ನಮಸ್ಕರಿಸಬೇಕು. ಈ ಪ್ರಾಜ್ಞನಾದ ಧನಂಜಯನು ಸ್ಮಶಾನದ ಮಧ್ಯದ ತೋಪಿನಲ್ಲಿಟ್ಟಿದ್ದ ಅಕ್ಷಯತೂಣೀರವನ್ನು ತೆಗೆದುಕೊಂಡು ಭೀಷ್ಮಾದಿಗಳನ್ನು ಗೆದ್ದನು" ಎಂದು ಅರ್ಜುನನ ಪರಿಚಯವನ್ನು ತಂದೆಗೆ ಮಾಡಿಕೊಟ್ಟನು.

ಕುಮಾರನು ತಾನು ಬಾಲಕನಾಗಿರುವುದರಿಂದ ತಾನು ಮಾಡಿದುದೂ ಪರರು ಮಾಡಿದರೆಂದು ಭ್ರಾಂತನಾಗಿದ್ದಾನೆಂದು ಬೃಹನ್ನಳೆಯು ಅವನ ಮಾತನ್ನು ಅಲ್ಲಗಳೆದಳು. ಉತ್ತರನು ಗಾಂಡೀವ ಧನುಸ್ಸನ್ನು ಏರಿಸಿ ಜಿಡ್ಡುಗಟ್ಟಿದ್ದ ಅವಳ ಮಣಿಬಂಧವನ್ನು ನೋಡಲು ತಂದೆಗೆ ಹೇಳಿದನು. ಅದು ಕೈಕಡಗದ ಗುರುತೆಂದು ಬೃಹನ್ನಳೆಯು ವಾದಿಸಿದಳು.

ರಾಜನು ಬೃಹನ್ನಳೆಯ ಕೈಯನ್ನು ತಾನೇ ನೋಡಲು ಮುಂದೆ ಬಂದಾಗ ಅರ್ಜುನನು ತನ್ನ ನಿಜ ವೃತ್ತಾಂತವನ್ನು ತಿಳಿಸಿದನು. ಪಾಂಡವರು ತನ್ನ ಮನೆಯಲ್ಲಿ ಇದ್ದುದರಿಂದ ತನ್ನ ವಂಶವು ಪಾವನವಾಯಿತೆಂದು ವಿರಾಟನಿಗೆ ಬಹಳ ಸಂತೋಷವಾಯಿತು.

ಅಭಿಮನ್ಯುವಿಗೆ ಏಕಕಾಲದಲ್ಲಿ ಆಶ್ಚರ್ಯವೂ ಸಂತೋಷವೂ ಆದುವು. ಅವನು "ಆದ್ದರಿಂದಲೇ ನಾನು ಹೀಯಾಳಿಸಿದರೂ ಇವರು ಕೋಪಿಸಿಕೊಳ್ಳಲಿಲ್ಲ. ನನ್ನನ್ನು ನಿಂದಿಸಿ ಹುಸಿನಗು ನಗುತ್ತಿದ್ದರು. ಈಗ ನನ್ನ ಪಿತೃಗಳ ದರ್ಶನದಿಂದ ಗೋಗ್ರಹಣವು ಮಂಗಳಕರವಾಯಿತು" ಎಂದನು.

ಬಳಿಕ ಅರಿಯದೆ ಮಾಡಿದ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಭೀಮನಿಗೆ ಅವನು ನಮಸ್ಕರಿಸಿದನು. ತರುವಾಯ ಅರ್ಜುನನಿಗೂ ರಾಜನಿಗೂ ಅವನು ವಂದಿಸಿದನು. ವಿರಾಟನು ಯುಧಿಷ್ಠಿರನ ಸ್ಥೈರ್ಯಧೈರ್ಯವನ್ನೂ ಭೀಮನ ವಜ್ರದೇಹವನ್ನೂ ಅರ್ಜುನನ ಜಾಣ್ಮೆಯನ್ನೂ ನಕುಲ ಸಹದೇವರ ದೇಹಕಾಂತಿಯನ್ನೂ ಕೃಷ್ಣನ ಸತ್ಕೀರ್ತಿಯನ್ನೂ ಪಡೆಯೆಂದು ಆಶೀರ್ವದಿಸಿದನು. ಅಭಿಮನ್ಯುವಿಗೆ ತನ್ನ ಮಗಳನ್ನು ಕೊಡಬಹುದಾಗಿತ್ತೆಂದು ವಿರಾಟನಿಗೆ ಅನ್ನಿಸಿತ್ತು. ಆದರೆ ಅಂತಃಪುರದಲ್ಲಿ ಉತ್ತರೆಯೊಡನೆ ಅರ್ಜುನನಿದ್ದುದರಿಂದ ಹಾಗೆ ಮಾಡುವುದು ಅವನಿಗೆ ಸರಿದೋರಲಿಲ್ಲ. ಆದ್ದರಿಂದ ಅರ್ಜುನನಿಗೆ ವಿಜಯಶುಲ್ಕವಾಗಿ ತನ್ನ ಮಗಳನ್ನು ಕೊಡುವುದಾಗಿ ವಿರಾಟನು ಹೇಳಿದನು.

ಅರ್ಜುನನು ಒಪ್ಪದೆ "ನಿನ್ನ ಅಂತಃಪುರದವರನ್ನು ನಾನು ಇದುವರೆಗೆ ತಾಯಿಯರಂತೆ ಕಂಡುಕೊಂಡಿದ್ದೆ. ನಿನ್ನ ಮಗಳನ್ನು ಬೇಕಾದರೆ ನನ್ನ ಮಗನಿಗೆ ತಂದು

ಕೊಳ್ಳುವೆ" ಎಂದು ಹೇಳಿದನು. ಅಭಿಮನ್ಯುವಿಗೆ ಮಗಳನ್ನು ಕೊಡಲು ವಿರಾಟನು ಒಪ್ಪದಿರುವನೆ! ಅಂದು ಶುಭದಿನವಾದುದರಿಂದ ಅಂದೇ ಕನ್ಯಾದಾನಮಾಡಲು ಅವನು ಹಾತೊರೆದನು. ಅದಕ್ಕೆ ಧರ್ಮರಾಯನೂ ಒಪ್ಪಿಕೊಂಡನು. ಈ ವಾರ್ತೆಯನ್ನು ಭೀಷ್ಮನಿಗೆ ತಿಳಿಸಲು ಧರ್ಮರಾಯನ ಅಪೇಕ್ಷೆಯಂತೆ ಉತ್ತರನು ಕೌರವರ ಪಾಳೆಯಕ್ಕೆ ಹೋದನು

ಅತ್ತ ಸೋತು ಕಂಗೆಟ್ಟ ಕೌರವನ ಸೈನ್ಯವು ಬದುಕಿದುವೆ ಎಂದು ಉದ್ಗರಿಸುತ್ತ ಓಡಿಹೋಗಿ ಶಿಬಿರವನ್ನು ಸೇರಿತು. ತಮ್ಮ ತಮ್ಮ ಜೀವ ರಕ್ಷಣೆಯೇ ಮುಖ್ಯವಾಗಿರುವಾಗ ಅಭಿಮನ್ಯುವನ್ನು ಕೇಳುವವರು ಯಾರು! ಅಭಿಮನ್ಯುವು ಸೆರೆ ಸಿಕ್ಕಿದ ಸುದ್ದಿ ಭೀಷ್ಮ ದ್ರೋಣರಿಗೆ ಅನಂತರ ತಿಳಿಯಿತು. ದ್ರೋಣನು ತನ್ನ ಪ್ರಿಯ ಶಿಷ್ಯನ ಮಗನನ್ನು ಕದ್ದು ಒಯ್ದ ಯುದ್ಧೋನ್ಮತ್ತನನ್ನು ಕೊಲ್ಲುವುದಾಗಿ ಆರ್ಭಟಿಸಿದನು.

"ಜೊತೆಯವರು ಬಿಟ್ಟು ಹೋದರೂ ತಾರುಣ್ಯದ ಮದದಿಂದ ಕಾಡಿನಲ್ಲಿ ಒಂಟಿಯಾಗಿ ಅಲೆಯುವ ಮರಿಯಾನೆಯನ್ನು ಹಿಡಿದುಕೊಂಡು ಹೋದವರು ಯಾರು?" ಎಂದು ಭೀಷ್ಮನು ಪರಿತಪಿಸಿದನು.

ದುರ್ಯೋಧನನಿಗೆ ಬಲು ವ್ಯಥೆಯಾಯಿತು. "ಅಭಿಮನ್ಯುವು ವಿಪತ್ತಿಗೊಳಗಾದರೆ ನನಗೆ ಅಪವಾದ ಬರುವುದು. ಅವನು ಪಾಂಡವರ ಮಗನಿಗಿಂತ ಹೆಚ್ಚಾಗಿ ನನ್ನ ಮಗನಂತಿದ್ದಾನೆ. ನನಗೆ ಪಾಂಡವರು ಹಗೆಗಳಾದರೇನು? ಬಾಲಕರು ನಿರಪರಾಧಿಗಳಲ್ಲವೆ! ಅವನನ್ನು ಹೇಗಾದರೂ ಬಿಡಿಸಿ ತರಲೇಬೇಕು" ಎಂದು ದುರ್ಯೋಧನನು ಚಿಂತಾಕ್ರಾಂತನಾದನು.

ಕರ್ಣನು ದುರ್ಯೋಧನನನ್ನು ಕುರಿತು 'ಅಭಿಮನ್ಯು ಸ್ವಜನ ಅಥವಾ ಬಾಲಕನೆಂಬ ಕರುಣೆಯ ಮಾತು ಹಾಗಿರಲಿ. ನಿನ್ನ ಹಿತಕ್ಕಾಗಿಯೇ ಅವನು ಯುದ್ಧ ಮುಖದಲ್ಲಿ ಸಿಕ್ಕಿಬಿದ್ದನು. ಅವನನ್ನು ಹೇಗಾದರೂ ಬಿಡಿಸಿ ತರುವುದು ನಮ್ಮ ಕರ್ತವ್ಯ. ಬಿಡಿಸಲಾಗದಿದ್ದರೆ ನಾವು ಬಿಲ್ಲು ಬಾಣಗಳನ್ನು ಬಿಸುಟು ನಾರುಡೆಯನ್ನು ಧರಿಸುವುದೇ ಮೇಲು' ಎಂದು ಔತ್ಸುಕ್ಯಪೂರ್ವಕವಾಗಿ ಹೇಳಿದನು.

ಶಕುನಿಯು "ನಿಮಗೇಕೆ ಚಿಂತೆ. ಅವನನ್ನು ಬಿಡಿಸಲು ಅನೇಕರಿದ್ದಾರೆ. ವಿರಾಟನಿಗೆ ಅವನು ಅರ್ಜುನನ ಮಗನೆಂದೂ ಕೃಷ್ಣನ ತಂಗಿಯ ಮಗನೆಂದೂ ಗೊತ್ತಾದರೆ ವಿಶ್ವಾಸದಿಂದ ಅವನೇ ಬಿಟ್ಟುಬಿಡುವನು.....ಇಲ್ಲದಿದ್ದರೆ ಬಲರಾಮನು

ಕೊಂಡು ಶಕುನಿಯು ಓಡಿ ಬಿಸಾಡಿದನು. ಅದು ದ್ರೋಣನ ಕಾಲ ಬಳಿಯಲ್ಲಿ ಹೋಗಿ ಬಿದ್ದಿತು. ದ್ರೋಣನು ಅದನ್ನು ಎತ್ತಿಕೊಂಡು ಅರ್ಜುನನ ಬಾಣವು ಪಿತೃಭಕ್ತಿಯನ್ನು ತೋರಲು ಭೀಷ್ಮನಿಗೆ ಮೊದಲು ನಮಸ್ಕರಿಸಿ ಈಗ ಗುರು ಭಕ್ತಿಯನ್ನು ತೋರಲು ತನಗೆ ಎರಗಿತೆಂದು ಸಿಶ್ವಾಸದಿಂದ ಹೇಳಿದನು.

ಶಕುನಿಯು ಯಾರ ಮಾತಿಗೂ ಒಪ್ಪದೆ "ಅರ್ಜುನನ ಹೆಸರಿದ್ದ ಮಾತ್ರಕ್ಕೆ ಹೇಗೆ ಒಪ್ಪಿಕೊಳ್ಳುವುದು ? ಉತ್ತರನಿಂದ ಪ್ರಮಾಣಪೂರ್ವಕವಾಗಿ ಏನಾದರೂ ಪತ್ರ ಬಂದರೆ ಒಪ್ಪಬಹುದು" ಎಂದು ತನ್ನ ಅನುಮಾನವನ್ನೇ ಸಮರ್ಥಿಸಿದನು. "ನನ್ನನ್ನು ವಂಚಿಸಲು ಉತ್ತರನು ಸುಳ್ಳು ಹೇಳಬಹುದು. ಆದ್ದರಿಂದ ಧರ್ಮರಾಯನನ್ನು ನಾನು ನೋಡಿದ ಹೊರತು ಅರ್ಧ ರಾಜ್ಯವನ್ನು ಕೊಡುವುದಿಲ್ಲ" ಎಂದು ದುರ್ಯೋಧನನು ಹೇಳಿದನು.

ಧರ್ಮಜನ ಮಾತಿನಂತೆ ಉತ್ತರನು ಕೌರವರ ಪಾಳಯಕ್ಕೆ ಹೋದನು. ಅಲ್ಲಿ ಅವನು ಭೀಷ್ಮನನ್ನು ಕಂಡು "ಉತ್ತರೆ ನನ್ನ ಸೊಸೆಯಾಗುತ್ತಾಳೆ. ಮದುವೆಯು ನಿಮ್ಮ ಅರಮನೆಯಲ್ಲಿ ನಡೆಯಬೇಕೋ ಇಲ್ಲವೆ ವಿರಾಟನಗರಿಯಲ್ಲಿ ನಡೆಯಬೇಕೋ ಎಂಬುದನ್ನು ತಿಳಿಸಬೇಕು" ಎಂದು ಧರ್ಮರಾಯನ ಸಂದೇಶವನ್ನು ತಿಳಿಸಿದನು. ಕೂಡಲೆ ಶಕುನಿಯು ವಿವಾಹವು ವಿರಾಟನಗರಿಯಲ್ಲಿಯೇ ನಡೆಯಲೆಂದನು.

ದ್ರೋಣನು "ಈಗ ಪಾಂಡವರಿರುವ ಸ್ಥಳವು ಗೊತ್ತಾಯಿತು. ಪಂಚರಾತ್ರದ ಗಡುವು ಇನ್ನೂ ಮುಗಿದಿಲ್ಲ. ಧರ್ಮದಿಂದ ನೀನು ಕೊಟ್ಟ ದಕ್ಷಿಣೆಯನ್ನು ಈಗ ಧರ್ಮದಿಂದಲೇ ಕೊಡು" ಎಂದು ದುರ್ಯೋಧನನನ್ನು ಕೇಳಿದನು.

ಅದಕ್ಕೆ ದುರ್ಯೋಧನನು ಮರುಮಾತಿಲ್ಲದೆ "ಪಾಂಡವರಿಗೆ ಮೊದಲಿನಂತೆ ಸಲ್ಲಬೇಕಾದ ಅರ್ಧ ರಾಜ್ಯವನ್ನು ಇದೋ ಕೊಟ್ಟೆ. ಶತ್ರುವರೂ ಸತ್ಯದ ಬಲದಿಂದ ಒದಗುವರಲ್ಲವೆ ?" ಎಂದು ಹೇಳಿ ತನ್ನ ಮಾತನ್ನು ಉಳಿಸಿಕೊಂಡನು. ದ್ರೋಣನಿಗೆ ಅಪಾರ ಸಂತೋಷವಾಯಿತು. ಅವನ ನಿರಂತರ ಬಯಕೆ ಈಡೇರಿತು.

ಪಾಂಡವರು ವಿರಾಟನನ್ನು ಮುಂದಿಟ್ಟುಕೊಂಡು ಕೌರವನ ಕಡೆಯವರೆಲ್ಲರನ್ನು ಸ್ವಾಗತಿಸಿ ವಿವಾಹ ಮಂಟಪಕ್ಕೆ ಕರೆದೊಯ್ದರು. ಮಹಾ ವೈಭವದಿಂದ ಅಭಿಮನ್ಯು ಉತ್ತರೆಯರ ವಿವಾಹವು ನಡೆಯಿತು. ಅನಂತರ ದುರ್ಯೋಧನನು ಕೊಟ್ಟ ಅರ್ಧ ರಾಜ್ಯವನ್ನು ಪಾಂಡವರು ತೆಗೆದುಕೊಂಡು ಸುಖವಾಗಿದ್ದರು.

ಮಧ್ಯಮ ವ್ಯಾಯೋಗ

# ಮಧ್ಯಮ ವ್ಯಾಯೋಗ

ಪಾಂಡವರು ವನದಲ್ಲಿ ವಾಸಮಾಡುತ್ತಿದ್ದಾಗ ಒಮ್ಮೆ ಧೌಮ್ಯ ಮಹರ್ಷಿಗಳು ಯಜ್ಞವನ್ನು ಮಾಡಿದರು. ಆ ಯಜ್ಞಕಾರ್ಯವನ್ನು ನೋಡಲು ಧರ್ಮರಾಯನು ತನ್ನ ಆಶ್ರಮದ ಕಾವಲಿಗೆ ಭೀಮಸೇನನನ್ನು ನೇಮಿಸಿ ತನ್ನ ಇತರ ಸಹೋದರರೊಡನೆ ಧೌಮ್ಯರ ಆಶ್ರಮಕ್ಕೆ ಹೋಗಿದ್ದನು. ಇತ್ತ ಭೀಮನು ಆಶ್ರಮದಿಂದ ಒಂದು ದೂರ ಪ್ರದೇಶಕ್ಕೆ ಹೋಗಿ ಅಲ್ಲಿ ವ್ಯಾಯಾಮ ಮಾಡುತ್ತಿದ್ದನು.

ಪಾಂಡವರ ಆಶ್ರಮಕ್ಕೆ ದೂರವಾದ ಅರಣ್ಯವೊಂದರಲ್ಲಿ ರಾಕ್ಷಸಿ ಹಿಡಿಂಬೆಯು ವಾಸವಾಗಿದ್ದಳು. ಅವಳೊಮ್ಮೆ ಉಪವಾಸಾಂತ್ಯದ ಪಾರಣೆಗಾಗಿ ಮನುಷ್ಯನನ್ನು ಹಿಡಿದು ತರಲು ತನ್ನ ಮಗ ಘಟೋತ್ಕಚನಿಗೆ ಆಜ್ಞೆ ಮಾಡಿದಳು. ಅವನು ಮನುಷ್ಯನನ್ನು ಹುಡುಕಿಕೊಂಡು ಕಾಡಿನಲ್ಲಿ ಹೋಗುತ್ತಿದ್ದನು.

ಅದೇ ಸಮಯಕ್ಕೆ ಯೂಪ ಗ್ರಾಮದ ಕೇಶವದಾಸನೆಂಬ ಬ್ರಾಹ್ಮಣನು ಉತ್ತರ ದಿಕ್ಕಿನ ಗ್ರಾಮವೊಂದರಲ್ಲಿದ್ದ ತನ್ನ ಸೋದರಮಾವನ ಮಗನ ಉಪನಯನಕ್ಕೆಂದು ತನ್ನ ಹೆಂಡತಿ ಮತ್ತು ತನ್ನ ಮೂವರು ಮಕ್ಕಳೊಡನೆ ಆ ಕಾಡಿನಲ್ಲೇ ಬರುತ್ತಿದ್ದನು. ಮನುಷ್ಯರಿಗಾಗಿ ಕಾಯುತ್ತಿದ್ದ ಘಟೋತ್ಕಚನು ಆ ಬ್ರಾಹ್ಮಣನನ್ನು ಅಡ್ಡಗಟ್ಟಿದನು.

ನಿರ್ಜನವಾದ ಆ ಕಾಡಿನಲ್ಲಿ ಹಠಾತ್ತನೆ ಕಾಣಿಸಿಕೊಂಡ ಘಟೋತ್ಕಚನನ್ನು ನೋಡಿ ಆ ಬ್ರಾಹ್ಮಣ ಕುಟುಂಬವು ತತ್ತರಿಸಿತು. ಅವರ ಜಂಘಾಬಲವೇ ಉಡುಗಿಹೋದಂತಾಯಿತು. ರಾಕ್ಷಸನ ಗಂಟಿಕ್ಕಿದ ಹುಬ್ಬು, ಜೋಡಿ ಗ್ರಹಗಳಂತೆ ಥಳಥಳಿಸುವ ಕೆಂಗಣ್ಣು, ಚೂರಿಯ ಅಲಗಿನಂತಿದ್ದ ಕೋರೆಹಲ್ಲು, ಸೊಂಡಲಿನಂತಿದ್ದ ತೋಳು, ನೇಗಿಲಿನಂತಿದ್ದ ಮೂಗು, ಕತ್ತಲೆಯನ್ನೇ ಅಣಕಿಸುವಂತಿದ್ದ ಅವನ ಮೈಬಣ್ಣ ಮೊದಲಾದುವನ್ನು ಅವರು ನೋಡಿ "ಅಯ್ಯೋ, ಇವನಾರು?" ಎಂದು ಭಯಪಟ್ಟು, ಅಲ್ಲಿಂದ ಪಲಾಯನ ಮಾಡತೊಡಗಿದರು.

ಘಟೋತ್ಕಚನು "ಅಯ್ಯಾ ಬ್ರಾಹ್ಮಣ, ನಿಲ್ಲು ನಿಲ್ಲು. ಗರುಡನನ್ನು ಕಂಡು ಹೆದರಿದ ಹಾವಿನಂತೆ ಹೆಂಡತಿ ಮಕ್ಕಳನ್ನು ರಕ್ಷಿಸಿಕೊಳ್ಳಲಾರದೆ ಏಕೆ ಓಡುತ್ತಿರುವೆ? ಹೋಗಬೇಡ, ನಿಲ್ಲು" ಎಂದು ಕೂಗಿಕೊಂಡು ಅವರನ್ನು ಹಿಂಬಾಲಿಸಿದನು. ರಾಕ್ಷಸನಿಂದ ತಪ್ಪಿಸಿಕೊಂಡು ಓಡುವುದಕ್ಕೂ ಆಗದೆ ಕೇಶವದಾಸನು ಹೆಂಡತಿ ಮಕ್ಕಳಿಗೆ ಹೆದರಬೇಡಿರೆಂದು ಧೈರ್ಯ ಹೇಳಿ ನಡುಗುತ್ತಾ ನಿಂತುಕೊಂಡನು.

ಭಯಾಕ್ರಾಂತರಾದ ಅವರನ್ನು ಘಟೋತ್ಕಚನು ನೋಡಿ "ಅಯ್ಯೋ, ಎಲ್ಲ ಕಾಲ ದೇಶಗಳಲ್ಲೂ ಬ್ರಾಹ್ಮಣರು ಪೂಜ್ಯರೆಂಬುದು ಗೊತ್ತು. ಆದರೂ ಇವರನು ತಾಯಿಯ ಅಪ್ಪಣೆಯಂತೆ ನಾನೀಗ ಹಿಡಿದೊಯ್ಯಬೇಕಾಗಿದೆ" ಎಂದು ತನ್ನಲ್ಲೇ ಅಂದುಕೊಂಡು ಅವರಿಗಾಗಿ ಮರುಗಿದನು.

ವೃದ್ಧ ಬ್ರಾಹ್ಮಣನು "ಈ ಕಾಡಿನಲ್ಲಿ ರಾಕ್ಷಸರಿದ್ದಾರೆ, ಎಚ್ಚರಿಕೆಯಿಂದ ಪ್ರಯಾಣ ಮಾಡಿ ಎಂದು ಮುನಿಗಳು ಎಚ್ಚರಿಸಿದಂತೆಯೇ ಈಗ ನಮಗೆ ರಾಕ್ಷಸನ ಭಯ ವುಂಟಾಗಿದೆ" ಎಂದು ಹೆಂಡತಿ ಮಕ್ಕಳಿಗೆ ಹೇಳಿದನು.

ಬ್ರಾಹ್ಮಣಿ "ಯಾರನ್ನಾದರೂ ಕೂಗಿಕೊಳ್ಳೋಣವೆ" ಎಂದು ಸಲಹೆಕೊಟ್ಟಳು. ಕೇಶವದಾಸನ ಹಿರಿಯ ಮಗನು "ಕತ್ತಲೆ ತುಂಬಿ ದುರ್ಗಮವಾದ ಈ ಕಾಡಿನಲ್ಲಿ ಯಾರು ತಾನೆ ಇರುವರು? ಮನಸ್ವಿಜನ ವಾಸಕ್ಕೆ ಈ ಕಾಡು ಯೋಗ್ಯವಾಗಿದೆ" ಎಂದನು.

ಮಗನ ಮಾತನ್ನು ಕೇಳಿ ಕೇಶವದಾಸನು "ಹೆದರಬೇಡಿ. ಹತ್ತಿರದಲ್ಲೆ ಪಾಂಡವರ ಆಶ್ರಮವಿರಬೇಕೆಂದು ತೋರುತ್ತದೆ. ನಾವು ಮೊರೆಯಿಟ್ಟರೆ ಶರಣಜನವತ್ಸಲ ರಾದ ಪಾಂಡವರು ದೀನರನ್ನು ರಕ್ಷಿಸುವರು. ಇಂಥ ರೌದ್ರ ಕರ್ಮಿಗಳನ್ನು ಶಿಕ್ಷಿಸಲು ಅವರು ಶಕ್ತರು" ಎಂದು ಧೈರ್ಯದಿಂದಿರಲು ಅವರಿಗೆ ಹೇಳಿದನು.

ಪ್ರಥಮ ಪುತ್ರನು "ಅಪ್ಪ, ಈಗ ಪಾಂಡವರು ಆಶ್ರಮದಲ್ಲಿಲ್ಲವೆಂದು ತೋರು ತ್ತದೆ. ಅವರ ಆಶ್ರಮದಿಂದ ಬಂದ ಒಬ್ಬ ಬ್ರಾಹ್ಮಣನು ಧೌಮ್ಯ ಮಹರ್ಷಿಗಳ 'ಶತಕುಂಭ ಯಜ್ಞ'ವನ್ನು ನೋಡಲು ಆಶ್ರಮದ ಕಾವಲಿಗೆ ಮಧ್ಯಮನನ್ನು ನಿಲ್ಲಿಸಿ ಅವರು ಹೋದರೆಂದು ಹೇಳಿದ್ದನು" ಎಂದು ತಾನು ಕೇಳಿದ್ದ ವಾರ್ತೆ ಯನ್ನು ತಿಳಿಸಿದನು.

ಪಾಂಡವಮಧ್ಯಮನಿದ್ದ ಮೇಲೆ ಪಾಂಡವರೆಲ್ಲ ಇದ್ದಂತಾಯಿತೆಂದು ಕೇಶವದಾಸ ನಿಗೆ ಧೈರ್ಯ ಬಂತು.

ಆದರೆ ಪಾಂಡವಮಧ್ಯಮನೂ ಕೂಡ ವ್ಯಾಯಾಮ ಮಾಡುವುದಕ್ಕೆಂದು ದೂರ ಪ್ರದೇಶಕ್ಕೆ ಹೋಗಿರುವನೆಂದು ಹಿರಿಯ ಮಗನು ಹೇಳಿದಾಗ ಕೇಶವದಾಸನಿಗೆ ನಿರಾಶೆಯಾಯಿತು. ಆ ಆಪತ್ತಿನಿಂದ ಪಾರಾಗುವ ಬೇರಾವ ಮಾರ್ಗವೂ ಅವನಿಗೆ ತೋರಲಿಲ್ಲ.

ಆದ್ದರಿಂದ ರಾಕ್ಷಸನನ್ನೇ ಮಾತನಾಡಿಸಿ ಅವನನ್ನು ಸಮಾಧಾನಪಡಿಸಬೇಕೆಂದು "ಅಯ್ಯಾ, ನಮಗೆ ಬಿಡುಗಡೆ ಉಂಟೊ?" ಎಂದು ಕೇಶವದಾಸನು ಪ್ರಶ್ನಿಸಿದನು.

"ಒಪ್ಪಂದಕ್ಕೊಪ್ಪಿದರೆ ಬಿಡುಗಡೆಯುಂಟು. ನನ್ನ ತಾಯಿ ಉಪವಾಸಾಂತ್ಯದ ಪಾರಣೆಗಾಗಿ ಯಾವನಾದರೊಬ್ಬ ಮನುಷ್ಯನನ್ನು ಹಿಡಿದುತರಲು ಅಪ್ಪಣೆ ಮಾಡಿದಳು. ಆದ್ದರಿಂದ ನಿಮ್ಮನ್ನು ಹಿಡಿದುಕೊಂಡೆ. ನಿನ್ನ ಮೂವರು ಮಕ್ಕಳಲ್ಲಿ ನನಗೊಬ್ಬನನ್ನು ನೀನು ಕೊಟ್ಟರೆ ಉಳಿದವರಿಗೆ ಬಿಡುಗಡೆ" ಘಟೋತ್ಕಚನು ಹೇಳಿದನು.

ಕೇಶವದಾಸನಿಗೆ ಕೋಪ ವ್ಯಸನಗಳುಂಟಾದುವು. "ಎಲಾ ನೀಚ, ಶಾಸ್ತ್ರಗಳನ್ನೆಲ್ಲ ತಿಳಿದುಕೊಂಡು ಮುಪ್ಪಾಗಿರುವ ನಾನು ಒಬ್ಬ ಮಗನನ್ನು ನಿನಗೆ ಕೊಟ್ಟು ಹೇಗೆ ತಾನೇ ಸುಖಪಡುತ್ತೇನೆ?" ರೋಷದಿಂದ ಅವನು ಹೇಳಿದನು.

ಘಟೋತ್ಕಚನು ನಿಷ್ಠುರನಾಗಿ "ಹಾಗಾದರೆ ಕೇಳು. ನೀನು ಒಬ್ಬನನ್ನು ಕೊಡದಿದ್ದರೆ ನೀನು ಕುಟುಂಬ ಸಮೇತನಾಗಿ ನಾಶವಾಗುತ್ತೀಯೆ" ಎಂದನು.

ಕೇಶವದಾಸನಿಗೆ ಬೇರಾವ ಉಪಾಯವೂ ತೋರಲಿಲ್ಲ. ರಾಕ್ಷಸನಿಗೆ ಮಗನನು ಕೊಡಲು ಮನಸ್ಸು ಒಪ್ಪಲಿಲ್ಲ. ಇನ್ನುಳಿದಿರುವುದು ತಾನೇ ರಾಕ್ಷಸನಿಗೆ ಆಹಾರವಾಗಿ ಹೋಗುವುದು. "ಈ ನನ್ನ ದೇಹ ಮಾಡಬೇಕಾದ ಕಾರ್ಯಗಳನ್ನು ಮಾಡಿದೆ. ಈಗ ಮುದಿಯಾಗಿದೆ. ಸಂಸ್ಕಾರವನ್ನು ಹೊಂದಿದೆ. ನನ್ನ ಮಕ್ಕಳ ಸಲುವಾಗಿ ಈ ಶರೀರವನ್ನೇ ರಾಕ್ಷಸಾಗ್ನಿಯಲ್ಲಿ ಹೋಮ ಮಾಡುವೆನು" ಎಂದು ಅವನು ಹೇಳಿದನು.

ಆದರೆ ಅವನ ಹೆಂಡತಿ ಅದಕ್ಕೊಪ್ಪಲಿಲ್ಲ. ಅವಳು ಪತಿ ಪುತ್ರರನ್ನು ರಕ್ಷಿಸುವುದಕ್ಕಾಗಿ ತಾನೇ ಹೋಗುವೆನೆಂದಳು.

ಘಟೋತ್ಕಚನು ತನ್ನ ತಾಯಿ ಹೆಂಗಸನ್ನು ಒಪ್ಪುವುದಿಲ್ಲವೆಂದು ಆ ಬ್ರಾಹ್ಮಣಿಯನ್ನೂ, ಮುದುಕನೆಂದು ಕೇಶವದಾಸನನ್ನೂ, ಕರೆದುಕೊಂಡು ಹೋಗಲು ನಿರಾಕರಿಸಿದನು.

ಆ ಬ್ರಾಹ್ಮಣನ ಹಿರಿಯ ಮಗನು "ಅಪ್ಪಾ, ನನ್ನ ಪ್ರಾಣವನ್ನು ಕೊಟ್ಟು ಗುರುಜನರ ಪ್ರಾಣವನ್ನು ರಕ್ಷಿಸಲು ಬಯಸುತ್ತೇನೆ. ಕುಲದ ರಕ್ಷಣೆಗಾಗಿ ನನ್ನನ್ನು ಇವನೊಡನೆ ಕಳುಹಿಸು" ಎಂದು ಬೇಡಿದನು.

ಕೇಶವದಾಸನ ದ್ವಿತೀಯ ಪುತ್ರನು "ಅಣ್ಣ, ಅದಾಗದು. ಕುಲಕ್ಕೂ ಲೋಕಕ್ಕೂ ಜ್ಯೇಷ್ಠ ಪುತ್ರನೇ ಶ್ರೇಷ್ಠನಾದವನು. ಅಲ್ಲದೆ ಪಿತೃಗಳಿಗೂ ಪ್ರಿಯನಾದವನು. ಆದ್ದರಿಂದ ನಾನು ರಾಕ್ಷಸನೊಡನೆ ಹೋಗುವೆನು" ಎಂದನು.

ಬಳಿಕ ತೃತೀಯ ಪುತ್ರನು "ಹಿರಿಯ ಅಣ್ಣನು ತಂದೆಗೆ ಸಮಾನನು. ಆದ ರಿಂದ ಹಿರಿಯರ ಪ್ರಾಣವನ್ನು ರಕ್ಷಿಸಲು ನಾನೇ ತಕ್ಕವನು. ನನ್ನನ್ನು ಕಳುಹಿಸಿ" ಎಂದು ಕೇಳಿಕೊಂಡನು.

ಅದಕ್ಕೆ ಪ್ರಥಮ ಪುತ್ರನು "ತಮ್ಮ, ಹಾಗಾಗದು. ತಂದೆಗೆ ಆಪತ್ತು ಬಂದಾಗ ಹಿರಿಯ ಮಗನು ಅವನನ್ನು ರಕ್ಷಿಸುವುದು ಕರ್ತವ್ಯವಾಗಿದೆ. ಗುರುಜನರ ಪ್ರಾಣ ರಕ್ಷಣೆಗಾಗಿ ನಾನೇ ಹೋಗುತ್ತೇನೆ" ಎಂದು ಒತ್ತಾಯಪೂರ್ವಕವಾಗಿ ಹೇಳಿದನು.

ವೃದ್ಧ ಕೇಶವದಾಸನು ತನ್ನ ಪ್ರೀತಿಪಾತ್ರನಾದ ಜ್ಯೇಷ್ಠ ಪುತ್ರನನ್ನು ಕಳುಹಿಸಲು ಒಪ್ಪಲಿಲ್ಲ. ಹಾಗೆಯೇ ಆ ಬ್ರಾಹ್ಮಣಿಯೂ ತನ್ನ ಕನಿಷ್ಠ ಪುತ್ರನನ್ನು ಬಿಟ್ಟು ಕೊಡಲು ಸಮ್ಮತಿಸಲಿಲ್ಲ.

ಇನ್ನು ಉಳಿದವನು ಮಧ್ಯಮ. ಅವನು "ತಾಯಿತಂದೆಗೆ ಬೇಡವಾದ ನಾನು ಯಾರಿಗೆ ತಾನೆ ಪ್ರಿಯನಾದೇನು!" ಎಂದನು.

ಘಟೋತ್ಕಚನು "ನೀನು ನನಗೆ ಬೇಕು, ನನ್ನೊಡನೆ ಬಾ" ಎಂದು ಕರೆದನು.

ರಾಕ್ಷಸನೊಡನೆ ಯಾರು ಹೋಗಬೇಕೆಂಬ ಸಮಸ್ಯೆ ಬಗೆಹರಿಯಿತು. ತನ್ನವ ರನ್ನು ರಕ್ಷಿಸಲು ಅವಕಾಶ ಸಿಕ್ಕಿದುದರಿಂದ ದ್ವಿತೀಯ ಪುತ್ರನು ನಾನು ಧನ್ಯನಾದೆ ನೆಂದು ಭಾವಿಸಿದನು. ಯಮನೊಡನೆ ದೊರಕುವ ಸ್ನೇಹಕ್ಕಿಂತ ಅವನಿಗೆ ಬಂಧುಗಳ ಪ್ರೇಮ ಶ್ರೇಷ್ಠವಾಗಿ ಕಂಡಿತು. ಹಿರಿಯರ ಪ್ರಾಣ ರಕ್ಷಣೆಗಾಗಿ ಪ್ರಾಣ ಬಿಡುವುದು ಅವನಿಗೆ ಹಿತವೆನಿಸಿತು. ಅವರಲ್ಲಿ ಯಾರೊಬ್ಬರೂ ಹೋಗ ಬೇಡವೆಂದು ಅವನನ್ನು ತಡೆಯಲಿಲ್ಲ.

ಅವನು ರಾಕ್ಷಸನೊಡನೆ ಹೊರಡುವ ಮೊದಲು ತನ್ನ ತಂದೆಗೆ ನಮಸ್ಕರಿಸಿದನು. ಕೇಶವದಾಸನು ಬ್ರಹ್ಮಲೋಕವು ಸಿದ್ಧಿಸಲೆಂದು ಮಗನನ್ನು ಆಶೀರ್ವದಿಸಿದನು. ತರುವಾಯ ದ್ವಿತೀಯನು ಕ್ರಮವಾಗಿ ತಾಯಿಗೂ ಅಣ್ಣನಿಗೂ ನಮಸ್ಕರಿಸಿ ತನಗೆ ವಂದಿಸಿದ ತಮ್ಮನನ್ನು ಹರಸಿದನು. ಅವನಿನ್ನು ತನ್ನವರನ್ನು ಅಗಲಿ ಮೃತ್ಯುವಿನ ಬಾಯಿಗೆ ಹೋಗಬೇಕು. ಅವನು ಪರಲೋಕಕ್ಕೆ ಹೋಗುವ ಮುನ್ನ ತನ್ನ ಬಾಯಾರಿಕೆಯನ್ನು ಪರಿಹರಿಸಿಕೊಳ್ಳಲೆಂದು ಘಟೋತ್ಕಚನ ಅನು ಮತಿ ಪಡೆದು ನೀರನ್ನು ಹುಡುಕಿಕೊಂಡು ಆ ಕಾಡಿನಲ್ಲಿ ಹೋದನು.

ಕೇಶವದಾಸನು ಮಗನು ಹೋದ ದಿಕ್ಕನ್ನೇ ನೋಡುತ್ತಾ ತನ್ನ ವಂಶವೆಂಬ ಪರ್ವತದಲ್ಲಿದ್ದ ಮೂರು ಶಿಖರಗಳಲ್ಲಿ ಮಧ್ಯದ ಶಿಖರವು ಮುರಿದು ಬಿದ್ದಿತೆಂದು ದುಃಖಿಸಿದನು.

ದ್ವಿತೀಯ ಪುತ್ರನು ನೀರು ಕುಡಿಯಲು ಹೋದಮೇಲೆ ತನ್ನ ತಾಯಿಯ ಆಹಾರ ಕಾಲವು ಮೀರುತ್ತಾ ಬಂದಿತೆಂದು ಘಟೋತ್ಕಚನು ಅವಸರಿಸುತ್ತ, ಮಗನನ್ನು ಕರೆಯಲು ಕೇಶವದಾಸನಿಗೆ ಹೇಳಿದನು. ಮಗನನು ಕೂಗಲು ತಂದೆಗೆ ಹೇಗೆ ತಾನೆ ಬಾಯಿ ಬಂದೀತು ? "ಅಯ್ಯಾ, ನಿನ್ನ ಮಾತು ರಾಕ್ಷಸರಿಗಿಂತ ಕ್ರೂರವಾಗಿದೆ" ಎಂದು ಕೇಶವದಾಸನು ನೊಂದು ನುಡಿದನು.

ಅದು ತನ್ನ ಪ್ರಕೃತಿಯ ದೋಷವೆಂದು ಹೇಳಿ ಬ್ರಾಹ್ಮಣನ ಕ್ಷಮೆಯನ್ನು ಯಾಚಿಸಿ "ನಾನೇ ಕೂಗುತ್ತೇನೆ, ನಿನ್ನ ಮಗನ ಹೆಸರೇನು ?" ಎಂದು ಘಟೋತ್ಕಚನು ಕೇಳಿದನು. ಇದನ್ನು ಕೇಳುವುದು ಸರಿಯಲ್ಲವೆಂದು ಕೇಶವದಾಸನು ಮಗನ ಹೆಸರನ್ನು ಹೇಳಲು ನಿರಾಕರಿಸಿಬಿಟ್ಟನು.

ಘಟೋತ್ಕಚನು ಪ್ರಥಮ ಪುತ್ರನನ್ನು ಕುರಿತು ನಿನ್ನ ತಮ್ಮನ ಹೆಸರೇನೆಂದು ಕೇಳಿದನು. ಅವನು "ನಿರ್ಭಾಗ್ಯ ಮಧ್ಯಮ" ಎಂದು ಉತ್ತರಿಸಿದನು.

ಬಳಿಕ ಘಟೋತ್ಕಚನೇ "ಅಯ್ಯಾ ಮಧ್ಯಮಾ, ಅಯ್ಯಾ ಮಧ್ಯಮಾ, ಬೇಗ ಬಾ" ಎಂದು ಕೂಗಿ ಕರೆಯತೊಡಗಿದನು. ಅವನ ಆ ಕೂಗು ಅರಣ್ಯದಲ್ಲಿ ಪ್ರತಿಧ್ವನಿಸಿತು. ಆಗ ಮಧ್ಯಮ ಪುತ್ರನು ಆ ಕಾಡಿನಲ್ಲಿ ನೀರನ್ನು ಹುಡುಕುತ್ತಿದ್ದನು.

ವ್ಯಾಯಾಮ ಮಾಡುತ್ತಿದ್ದ ಭೀಮಸೇನನಿಗೆ "ಮಧ್ಯಮಾ, ಮಧ್ಯಮಾ" ಎಂಬ ಘಟೋತ್ಕಚನ ಕೂಗು ಕೇಳಿಸಿತು. ಅವನು ವ್ಯಾಯಾಮವನ್ನು ನಿಲ್ಲಿಸಿ ಆ ಧ್ವನಿಯನ್ನು ಕಿವಿಗೊಟ್ಟು ಕೇಳಿದನು. ಮತ್ತೆ "ಮಧ್ಯಮಾ, ಮಧ್ಯಮಾ" ಎಂಬ ಕೂಗು ಗಟ್ಟಿಯಾಗಿಯೂ ಸ್ಪಷ್ಟವಾಗಿಯೂ ಕೇಳಿಬಂದಿತು. ನಿರ್ಜನವಾದ ಅರಣ್ಯ ಪ್ರದೇಶದಲ್ಲಿ ಹೀಗೆ ತಾರಸ್ವರದಿಂದ ಕೂಗುವವರು ಯಾರಿರಬಹುದೆಂದು ಅವನಿಗೆ ಆಶ್ಚರ್ಯವಾಯಿತು. ಆ ಧ್ವನಿ ಅರ್ಜುನನ ಧ್ವನಿಯನ್ನು ಹೋಲುವುವೆಂದು ಅವನು ಎಣಿಸಿದನು.

ಅತ್ತ ಘಟೋತ್ಕಚನು ತನ್ನ ತಾಯಿಯ ಊಟದ ಹೊತ್ತು ಮೀರುತ್ತಾ ಬಂದಿತೆಂದು ಮತ್ತೂ ಗಟ್ಟಿಯಾಗಿ ಮಧ್ಯಮನನ್ನು ಮತ್ತೆ ಮತ್ತೆ ಕೂಗುತ್ತಿದ್ದನು. ಭೀಮನು ವ್ಯಾಯಾಮವನ್ನು ನಿಲ್ಲಿಸಿ ಧ್ವನಿ ಬಂದತ್ತ ವೇಗವಾಗಿ ಧಾವಿಸಿದನು. ಅವನಿಗೆ ದೂರದಿಂದಲೆ ಘಟೋತ್ಕಚನು ಕಾಣಿಸಿದನು. ಅವನ ಸುಂದರವಾದ ರೂಪವನ್ನು ಕಂಡು ಭೀಮನು ಬೆರಗಾದನು. 'ಸಿಂಹದ ಮುಖ, ಸಿಂಹದ

ಕೋರೆಗಳು, ಜೇನಿನಂಥ ಕಣ್ಣು, ಗಿಡುಗನ ಮೂಗು, ಆನೆಯ ಕಪೋಲಗಳು, ಮಾಂಸ ತುಂಬಿದ ಪುಷ್ಟವಾದ ಮೈ, ಮದಿಸಿದ ಆನೆ ಮತ್ತು ಗೂಳಿಗಳನ್ನು ಹೋಲುವ ನಡಗೆಗಳಿಂದ ಇವನು ಬಲಿಷ್ಠನಂತೆ ತೋರುವನು. ರಾಕ್ಷಸನಾದ ಇವನು ಯಾವನೊ ಲೋಕವೀರನ ಮಗನಾಗಿರಬೇಕು' ಎಂದು ಭೀಮನು ನಿಶ್ಚಯಿಸಿದನು.

ಘಟೋತ್ಕಚನ ಸಹನೆ ಮೀರಿತು. ತಾಯಿಯ ಊಟಕ್ಕೆ ಹೊತ್ತಾಯಿತೆಂದು ಮಧ್ಯಮನನ್ನು ಪುನಃ ಗಟ್ಟಿಯಾಗಿ ಕೂಗಿದನು. ಭೀಮನು "ಇದೋ ಬಂದೆ" ಎಂದು ಎದುರಿಗೆ ನಿಂತುಕೊಂಡನು.

ಘಟೋತ್ಕಚನು "ಇವನು ಬ್ರಾಹ್ಮಣನ ಮಗನಲ್ಲ. ಆಹಾ! ಇವನು ಎಷ್ಟು ಮನೋಹರವಾಗಿದ್ದಾನೆ! ಇವನ ಆಕೃತಿಯಾದರೂ ಸಿಂಹಕ್ಕೆ ಸಮವಾಗಿದೆ. ಇವನ ತೋಳುಗಳು ಕನಕತಾಳಗಳನ್ನು ಹೋಲುತ್ತಿವೆ. ಇವನು ಕಮಲಾಕ್ಷನಾದ ವಿಷ್ಣುವೇ ಇರಬಹುದು" ಎನ್ನುತ್ತ ಬೆರಗಾಗಿ, "ಅಯ್ಯಾ ಮಧ್ಯಮಾ, ನಿನ್ನನ್ನಯ್ಯ ಕೂಗುತ್ತಿರುವುದು" ಎಂದು ಕರೆದನು.

"ಆದ್ದರಿಂದಲೇ ನಾನು ಬಂದಿರುವುದಯ್ಯ" ಭೀಮನು ಹೇಳಿದನು.

"ಏನು, ನೀನೂ ಮಧ್ಯಮನೆ?" ಘಟೋತ್ಕಚನು ಆಶ್ಚರ್ಯದಿಂದ ಕೇಳಿದನು.

"ಹೌದು. ನಾನು ಅವಧ್ಯರಲ್ಲಿ ಮಧ್ಯಮ. ಧೀರರಲ್ಲಿ ಮಧ್ಯಮ. ಭೂಮಿಯಲ್ಲಿ ಮಧ್ಯಮ ಮತ್ತು ಸೋದರರಲ್ಲೂ ನಾನೇ ಮಧ್ಯಮ. ಅಲ್ಲದೆ ಪಂಚಭೂತಗಳಿಗೆ ಮಧ್ಯಮ. ಕ್ಷತ್ರಿಯರಲ್ಲಿ ಮಧ್ಯಮ. ಜನ್ಮದಲ್ಲಿ ಮಧ್ಯಮ ಮತ್ತು ಲೋಕದ ಎಲ್ಲ ಕಾರ್ಯದಲ್ಲೂ ಮಧ್ಯಮ" ಭೀಮನು ದಿಟ್ಟತನದಿಂದ ಉತ್ತರ ಹೇಳಿದನು.

ಅದನ್ನು ಕೇಳಿ ಪಾಂಡವಮಧ್ಯಮನೇ ತಮ್ಮನ್ನು ಮೃತ್ಯುವಿನಿಂದ ಉಳಿಸಲು ಬಂದಿರುವನೆಂದು ಕೇಶವದಾಸನಿಗೆ ಹರ್ಷವಾಯಿತು.

ಅಷ್ಟರಲ್ಲಿ ಬ್ರಾಹ್ಮಣನ ಮಧ್ಯಮ ಪುತ್ರನು ಪ್ರವೇಶಿಸಿ "ಹತ್ತಿರದ ತಾವರೆಯ ಕೊಳದಲ್ಲಿ ಆಚಮನ ಮಾಡಿ, ತಾವರೆಯ ಎಲೆಯಲ್ಲಿ ನೀರನ್ನು ತೆಗೆದುಕೊಂಡು, ನನಗೆ ನಾನೇ ತರ್ಪಣವನ್ನು ಕೊಟ್ಟುಕೊಂಡೆ" ಎಂದು ತನ್ನಲ್ಲೇ ಹೇಳಿಕೊಳ್ಳುತ್ತಾ ರಾಕ್ಷಸನ ಬಳಿಗೆ ಹೋಗಿ ನಿಂತುಕೊಂಡನು.

ನನ್ನ ಹಿರಿಯರ ಪ್ರಾಣವನ್ನುಳಿಸಲು ನನ್ನ ಪ್ರಾಣವನ್ನು ಮೊದಲೇ ಇವನಿಗೆ ನೀಡಲಿಚ್ಛಿಸಿದ್ದೇನೆ. ನೀನು ಇನ್ನೂ ಪ್ರಾಯದವನು, ರೂಪವಂತನು, ಗುಣವಂತನು. ಭೂಮಿಯಲ್ಲಿ ಇನ್ನೂ ಕೆಲವು ಕಾಲ ನೀನು ಜೀವಿಸು" ಎಂದನು.

ಬ್ರಾಹ್ಮಣ ವಟುವಿನ ಮಾತಿಗೆ ಭೀಮನು ಒಪ್ಪದೆ "ನಾನು ಕ್ಷತ್ರಿಯ. ಕ್ಷತ್ರಿಯನಾದವನು ಪೂಜ್ಯರಾದ ಬ್ರಾಹ್ಮಣರನ್ನು ರಕ್ಷಿಸಬೇಕಷ್ಟೆ! ಆದ್ದರಿಂದ ಬ್ರಾಹ್ಮಣನ ಶರೀರಕ್ಕೆ ಬದಲು ನನ್ನ ಶರೀರವನ್ನು ಕೊಡುತ್ತೇನೆ" ಎಂದನು.

ಇವನು ಕ್ಷತ್ರಿಯನಾದುದರಿಂದ ಹೀಗೆ ಗರ್ವಿತನಾಗಿದ್ದಾನೆಂದುಕೊಂಡು ಭೀಮನನ್ನೇ ಕೊಂಡು ತೆಗೆದುಕೊಂಡು ಹೋಗಲು ಘಟೋತ್ಕಚನು ನಿಶ್ಚಯಿಸಿ "ಹಾಗಾದರೆ, ನೀನು ನನ್ನ ಹಿಂದೆ ಬಾ" ಎಂದನು.

ಅವನ ಹಿಂದೆ ಸುಮ್ಮನೆ ಹೋಗಲು ಭೀಮನಿಗೆ ಇಷ್ಟವಿಲ್ಲ. ಅಲ್ಲದೆ ಅವನಿಗೆ ಮಗನ ಬಲವನ್ನು ಪರೀಕ್ಷಿಸುವ ಆಸೆ ಬೇರೆ. ಆದ್ದರಿಂದ ಅವನು "ಅತಿ ಬಲಶಾಲಿಯಾದ ನಾನು ಒಬ್ಬನನ್ನು ಹಿಂಬಾಲಿಸಿ ಹೋಗಲಾರೆ. ನಿನಗೆ ಶಕ್ತಿ ಇದ್ದರೆ ನನ್ನನ್ನು ಕರೆದುಕೊಂಡು ಹೋಗು" ಎಂದು ದರ್ಪದಿಂದ ನುಡಿದನು.

"ನಾನು ಯಾರು ಗೊತ್ತೋ?" ಘಟೋತ್ಕಚನು ಭೀಮನನ್ನು ಸಾಮಾನ್ಯ ಬಲಶಾಲಿಯೆಂದು ಭಾವಿಸಿ ಗರ್ವದಿಂದ ಪ್ರಶ್ನಿಸಿದನು.

"ನೀನು ನನ್ನ ಮಗ" ಭೀಮನು ಉತ್ತರಿಸಿದನು.

"ನಾನು ಹೇಗೆ ನಿನ್ನ ಮಗ?"

"ಪ್ರಜೆಗಳೆಲ್ಲರೂ ಕ್ಷತ್ರಿಯರ ಮಕ್ಕಳುತಾನೆ! ಆದ್ದರಿಂದ ಹಾಗೆಂದೆ."

"ನೀನು ನನಗೆ ಹೆದರಿಕೊಂಡು ಧರ್ಮದ ಮಾತನ್ನು ಆಡುತ್ತಿದ್ದೀಯೆ!" ಘಟೋತ್ಕಚನು ನಕ್ಕು ಹೇಳಿದನು.

ಭೀಮನು ನಿರ್ಭಯವಾಗಿ ಧೀರವಾಣಿಯಿಂದ ಹೇಳಿದನು. "ಸತ್ಯದ ಮೇಲಾಣೆಯಿಟ್ಟು ಹೇಳುತ್ತೇನೆ. ಭಯ ಎಂದರೆ ಏನೆಂದು ನನಗೆ ತಿಳಿಯದು. ಈಗ ಅದನ್ನು ನಿನ್ನಿಂದ ತಿಳಿಯಬೇಕಾಗಿದೆ."

"ನಿನಗೆ ಭಯವನ್ನು ಕಲಿಸುತ್ತೇನೆ. ಹಾಗಾದರೆ ಆಯುಧವನ್ನು ಹಿಡಿ."

"ಹಿಡಿದುಕೊಂಡೇ ಇದ್ದೇನೆ. ಶತ್ರುನಿಗ್ರಹದಲ್ಲೇ ಆನಂದಿಸುವ ಕಾಂಚನಸ್ತಂಭದಂತಿರುವ ಈ ನನ್ನ ಬಲದೋಳೇ ನನ್ನ ಆಯುಧ" ಭೀಮನೆಂದನು.

"ಇದು ನನ್ನ ತಂದೆಯಾದ ಭೀಮಸೇನನಿಗೆ ಒಪ್ಪುವ ಮಾತು" ಘಟೋತ್ಕಚನು ಹೇಳಿದನು.

"ಬ್ರಹ್ಮ, ವಿಷ್ಣು, ಮಹೇಶ್ವರ, ಇಂದ್ರ, ಯಮರಲ್ಲಿ ನಿನ್ನ ತಂದೆ ಯಾರಿಗೆ ಸಮವಾಗಿದ್ದಾನೆ?" ಭೀಮನು ಪ್ರಶ್ನಿಸಿದನು.

ಘಟೋತ್ಕಚನು ಅವನು ಎಲ್ಲರಿಗೂ ಸಮನೆಂದನು. ಅವನ ಮಾತನ್ನು ಭೀಮನು ಸುಳ್ಳೆಂದು ಅಲ್ಲಗಳೆಯಲು, ರಾಕ್ಷಸನು ಗುರುನಿಂದೆಯನ್ನು ಕೇಳಿ ರೇಗಿ, ಹತ್ತಿರದ ಮರವೊಂದನ್ನು ಕಿತ್ತುಕೊಂಡು ಭೀಮನನ್ನು ಹೊಡೆದನು. ಭೀಮನು ಅಲುಗದೆ ನಗುತ್ತ ನಿಂತಿದ್ದನು. ರಾಕ್ಷಸನು ಆಮೇಲೆ ಒಂದು ಕೋಡುಗಲ್ಲನ್ನು ಎತ್ತಿಕೊಂಡು ಅವನನ್ನು ಹೊಡೆದನು. ಆದರೂ ಭೀಮನು ಸಾಯದೆ ಕಾಡಾನೆ ಕೋಪಿಸಿಕೊಂಡರೂ ಹುಲಿಯನ್ನು ಹೆದರಿಸಲಾರದೆಂದು ಅವನನ್ನು ಗೇಲಿಮಾಡಿ ನಕ್ಕನು.

ಘಟೋತ್ಕಚನು ಸ್ವಲ್ಪ ಯೋಚಿಸಿ, ಭೀಮನ ಮಗನೂ ವಾಯುವಿನ ಮೊಮ್ಮಗನೂ ಆದ ತನಗೆ ಬಾಹುಯುದ್ಧದಲ್ಲಿ ಸಮರಿಲ್ಲವೆಂದುಕೊಂಡು ಬಾಹುಯುದ್ಧಕ್ಕೆ ಪ್ರಾರಂಭಿಸಿ, ಭೀಮನನ್ನು ಪಟ್ಟುಹಿಡಿದು ತನ್ನ ತೋಳುಗಳಿಂದ ಬಂಧಿಸಿದನು.

ದುರ್ಯೋಧನನ ಶತ್ರುಪಕ್ಷವು ಬೆಳೆಯುತ್ತಿದೆಯೆಂದು ಭೀಮನು ಮನಸ್ಸಿನಲ್ಲಿ ಸಂತೋಷಪಟ್ಟು ರಾಕ್ಷಸನ ಪಟ್ಟನ್ನು ಬಿಡಿಸಿಕೊಂಡು "ನಾನು ಬಲಶಾಲಿಯೆಂಬ ಹೆಮ್ಮೆಯನ್ನು ಬಿಟ್ಟುಬಿಡು. ಬಾಹು ಯುದ್ಧದಲ್ಲಿ ನನಗೆ ಸ್ವಲ್ಪವೂ ಶ್ರಮ ಕಾಣುವುದಿಲ್ಲ" ಎಂದು ಹಾಸ್ಯಮಾಡಿದನು.

ಭೀಮನು ಯಾವುದಕ್ಕೂ ಸೋಲದಿರಲು ಘಟೋತ್ಕಚನು ಕಡೆಗೆ ತನ್ನ ತಾಯಿಯಿಂದ ದೊರೆತಿದ್ದ ಮಾಯಾಪಾಶದಿಂದ ಅವನನ್ನು ಬಂಧಿಸಿದನು. ಮಾಯಾಪಾಶದ ಮೋಕ್ಷಮಂತ್ರವು ಮಹೇಶ್ವರನ ಪ್ರಸಾದದಿಂದ ಭೀಮನಿಗೆ ಗೊತ್ತಿತ್ತು. ಆದ್ದರಿಂದ ಅವನು ಬ್ರಾಹ್ಮಣವಟುವಿನಿಂದ ನೀರನ್ನು ತರಿಸಿಕೊಂಡು ಆಚಮನ ಮಾಡಿ ಮಂತ್ರವನ್ನು ಜಪಿಸಲು ಮಾಯಾಪಾಶವು ಕಳಚಿಹೋಯಿತು.

ಆಗ ಘಟೋತ್ಕಚನ ಮುಖ ಪೆಚ್ಚಾಯಿತು. ಶಕ್ತಿಯಿಂದ ಅವನನ್ನು ಗೆಲ್ಲಲಾಗಲಿಲ್ಲ. ಇನ್ನು ಉಪಾಯದಿಂದ ಭೀಮನನ್ನು ತಾಯಿಯ ಬಳಿಗೆ ಕರೆದುಕೊಂಡು ಹೋಗಬೇಕೆಂದು "ಆರ್ಯ, ಹಿಂದಿನ ನಿನ್ನ ಒಪ್ಪಂದವನ್ನು ಜ್ಞಾಪಿಸಿಕೊ" ಎಂದನು. ಭೀಮನು ಆ ಮಾತಿಗೆ ತಾನು ಬರುವುದಾಗಿ ಒಪ್ಪಿ, ಅವನನ್ನು ಹಿಂಬಾಲಿಸಿದನು.

ಘಟೋತ್ಕಚನು ತಾಯಿಯ ಆಹಾರಕ್ಕೆ ಹೊತ್ತಾಯಿತೆಂದು ಅವಸರದಿಂದ ಮುಂದೆ ಹೋಗುತ್ತಿದ್ದನು. ಭೀಮನಾದರೂ ಜಡಿಮಳೆಯನ್ನು ಲೆಕ್ಕಿಸದೆ ಮಳೆಹನಿಯನ್ನು ಕೊಡಹುತ್ತ ನಿಧಾನವಾಗಿ ಮುಂಬರಿಯುವ ಗೂಳಿಯಂತೆ ಅವನ ಹಿಂದೆ ಹೋಗುತ್ತಿದ್ದನು. ಘಟೋತ್ಕಚನು ಭೀಮನನ್ನು ದೂರದಲ್ಲಿ ನಿಲ್ಲಿಸಿ ತನ್ನ ತಾಯಿಯ ಬಳಿಗೆ ಹೋಗಿ ಅವಳಿಗೆ ಆಹಾರಕ್ಕಾಗಿ ಒಬ್ಬ ಮನುಷ್ಯನನ್ನು ತಂದಿರುವುದಾಗಿ ತಿಳಿಸಿದನು.

ಹಿಡಿಂಬೆಗೆ ಮಗನು ಎಂಥ ಮನುಷ್ಯನನ್ನು ತಂದಿರುವನೆಂದು ನೋಡುವ ಕುತೂಹಲವಾಯಿತು. ಮಗನೊಡನೆ ಹೋಗಿ ನೋಡುತ್ತಾಳೆ! ಎಷ್ಟೋ ವರ್ಷಗಳಾದ ಮೇಲೆ ಅವಳ ವಲ್ಲಭನೇ ಬಂದು ನಿಂತಿದ್ದಾನೆ. ಅವನು ತಮ್ಮಿಬ್ಬರಿಗೂ ದೇವತೆಯೆಂದು ಮಗನಿಗೆ ಹೇಳಿ ಆದರದಿಂದ ಪತಿಯನ್ನು ಸ್ವಾಗತಿಸಿದಳು. ಘಟೋತ್ಕಚನು ತಂದೆಗೆ ನಮಸ್ಕರಿಸಿ ತನ್ನ ತಪ್ಪನ್ನು ಮನ್ನಿಸಬೇಕೆಂದು ಬೇಡಿಕೊಂಡನು. ಪ್ರೀತಿಯಿಂದ ಮಗನನ್ನು ಭೀಮನು ಆಲಂಗಿಸಿದನು.

ಅಷ್ಟರಲ್ಲಿ ಕೇಶವದಾಸನೂ ಪತ್ನಿಪುತ್ರರೊಡನೆ ಭೀಮನ ಬಳಿಗೆ ಹೋದನು. ತಂದೆಯ ಆಜ್ಞೆಯಂತೆ ಘಟೋತ್ಕಚನು ಕೇಶವದಾಸನಿಗೆ ನಮಸ್ಕರಿಸಿದನು. ಅವನನ್ನು ಆಶೀರ್ವದಿಸಿ, ಕೇಶವದಾಸನು ಭೀಮನಿಗೆ ತನ್ನ ಕೃತಜ್ಞತೆಯನ್ನು ಸೂಚಿಸಿ, ಅವನ ಅಪ್ಪಣೆಯನ್ನು ಪಡೆದು ತನ್ನ ಪ್ರಯಾಣವನ್ನು ಮುಂದುವರಿಸಿದನು.

ಪಾಂಡವಮಧ್ಯಮನು ಹಿಡಿಂಬೆ ಘಟೋತ್ಕಚರೊಡನೆ ಆಶ್ರಮದ ಬಾಗಿಲವರೆಗೆ ಹೋಗಿ ಕೇಶವದಾಸ ಮತ್ತು ಅವನ ಹೆಂಡತಿ ಮಕ್ಕಳನ್ನು ಗೌರವದಿಂದ ಕಳುಹಿಸಿಕೊಟ್ಟನು.



# ದೂತ ವಾಕ್ಯ

ಕೌರವರು ಮತ್ತು ಪಾಂಡವರು ರಾಜ್ಯಕ್ಕಾಗಿ ಯುದ್ಧವನ್ನು ಮಾಡಬೇಕಾಯಿತು. ಅದಕ್ಕಾಗಿ ಉಭಯಪಕ್ಷದವರೂ ಸಮರಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಕೌರವನು ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ಕೂಡಿಕೊಂಡು ಯುದ್ಧಕ್ಕೆ ಸಿದ್ಧನಾಗಿದ್ದನು. ಯುದ್ಧವು ಅನಿವಾರ್ಯವಾಗಿ ಕಂಡುಬಂದಿತು. ಆದರೂ ಕೃಷ್ಣನು ಪಾಂಡವರ ಅಪೇಕ್ಷೆಯಂತೆ ಸಂಧಿಯನ್ನು ಮಾಡಲು ಹಸ್ತಿನಾವತಿಗೆ ಹೋದನು.

ಕೌರವರ ಪಕ್ಷದ ರಾಜರೆಲ್ಲ ಹಸ್ತಿನಾವತಿಯಲ್ಲಿ ಆಗಲೇ ಸೇರಿದ್ದರು. ಕೃಷ್ಣನ ಆಗಮನದಿಂದ ಹಸ್ತಿನಾವತಿಯಲ್ಲಿ ಹಿಂದೆಂದೂ ಇಲ್ಲದ ಸಡಗರವುಂಟಾಗಿತ್ತು. ಮುಂದೆ ಸಂಧಿಯೋ ಇಲ್ಲ ಸಮರವೋ ಎಂದು ಎಲ್ಲರೂ ಕುತೂಹಲದಿಂದಿದ್ದರು.

ಸಂಧಿಯನ್ನು ಮಾಡಿಕೊಳ್ಳಲು ದುರ್ಯೋಧನನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಯುದ್ಧವೇ ನಡೆದುಹೋಗಲೆಂಬುದು ಅವನ ಆಸೆ. ಯುದ್ಧೋತ್ಸಾಹದಿಂದ ಅವನ ಹೃದಯವು ಹಿಗ್ಗಿತು. ಪಾಂಡವರ ಸೈನ್ಯದಲ್ಲಿ ನುಗ್ಗಿ ಮದದಾನೆಗಳ ದಂತವನ್ನು ಕಿತ್ತೆಸೆಯುವ ಬಯಕೆ ಅವನಲ್ಲಿ ಬಲಿಯಿತು. ಆದ್ದರಿಂದ ತನ್ನ ಪಕ್ಷದ ರಾಜರನ್ನೆಲ್ಲಾ ಸಭೆ ಸೇರಿಸಲು ಅವನು ಆಜ್ಞೆಯಿತ್ತನು.

ದುರ್ಯೋಧನನ ಆಜ್ಞೆಯಂತೆ ದ್ರೋಣ ಭೀಷ್ಮರಾದಿಯಾಗಿ ಸರ್ವರೂ ಆಸ್ಥಾನದಲ್ಲಿ ಸೇರಿದರು. ದುರ್ಯೋಧನನು ಸಂದರ್ಭೋಚಿತವಾಗಿ ಅಲಂಕರಿಸಿಕೊಂಡು ಉತ್ಸಾಹದಿಂದ ರಾಜಸಭೆಗೆ ಹೋದನು. ತನ್ನ ಹನ್ನೊಂದು ಅಕ್ಷೋಹಿಣಿ ಸೇನೆಗೆ ಸೇನಾಪತಿಯಾಗಲು ಯಾರು ತಕ್ಕವರೆಂದು ಸಭಿಕರನ್ನು ಅವನು ಕೇಳಿದನು. ಅವರು ಅದು ಗಹನ ವಿಚಾರ, ಆಲೋಚಿಸಿ ಹೇಳಬೇಕೆಂದುದರಿಂದ ದುರ್ಯೋಧನನು ಅವರೊಡನೆ ಮಂತ್ರಶಾಲೆಗೆ ಹೋದನು. ಅಲ್ಲಿ ಅವನು ದ್ರೋಣ ಭೀಷ್ಮರೇ ಮೊದಲಾದ ಹಿರಿಯರಿಗೂ ಕ್ಷತ್ರಿಯ ರಾಜರುಗಳಿಗೂ ನಮಸ್ಕರಿಸಿ ಅವರವರ ಯೋಗ್ಯತಾನುಸಾರ ಅವರನ್ನು ಉಚಿತಾಸನಗಳಲ್ಲಿ ಕೂರಿಸಿ ತಾನೂ ಕುಳಿತುಕೊಂಡನು.

ಆಮೇಲೆ ಅವರನ್ನು ಕುರಿತು "ನನಗಿರುವ ಹನ್ನೊಂದು ಅಕ್ಷೋಹಿಣಿ ಸಂಖ್ಯೆಯ ಸೈನ್ಯಕ್ಕೆ ಸೇನಾಪತಿಯಾಗಲು ಯಾರು ತಕ್ಕವರು" ಎಂದು ದುರ್ಯೋಧನನು ಕೇಳಿದನು.

ಗಾಂಧಾರರಾಜನಾದ ಶಕುನಿಯು ಹೇಳಲೆಂದು ಸಭಿಕರು ತಿಳಿಸಲು, ಶಕುನಿಯು ಭೀಷ್ಮನಿರುವಾಗ ಮತ್ತೆ ಯಾರುತಾನೆ ಸೇನಾಪತಿಯಾಗಲು ತಕ್ಕವರೆಂದು ನುಡಿದನು.

ಭೀಷ್ಮನು ಸೇನಾಪತಿಯಾಗುವುದು ದುರ್ಯೋಧನನಿಗೆ ಒಪ್ಪಿಗೆಯಾಯಿತು. ಅವನು "ಆಗಲಿ. ಆಗಲಿ. ನನಗೂ ಇದೇ ಇಷ್ಟ. ಪಿತಾಮಹನಿಗೆ ಮಹಾವೈಭವ ದಿಂದ ಅಭಿಷೇಕ ಮಾಡುವಾಗ ಅವನ ನೆತ್ತಿಯಿಂದ ಸುರಿವ ನೀರಿನ ಜೊತೆಯಲ್ಲಿ ಶತ್ರುರಾಜನ ಹೃದಯಗಳು ಮುರಿದು ಬೀಳಲಿ" ಎಂದು ಹರ್ಷದಿಂದ ಹೇಳಿದನು.

ಕಂಚುಕಿಯು ಬಂದು ಪುರುಷೋತ್ತಮನಾದ ನಾರಾಯಣನು ದೂತ ಕಾರ್ಯ ಕ್ಕಾಗಿ ಪಾಂಡವರ ಶಿಬಿರದಿಂದ ದಯಮಾಡಿಸಿರುವನೆಂದು ದುರ್ಯೋಧನನಿಗೆ ಬಿನ್ನವಿಸಿದನು. ಕಂಸಭೃತ್ಯನಾದ ವಾಸುದೇವನನ್ನು ಕಂಚುಕಿಯು ಪುರು ಷೋತ್ತಮನೆಂದು ಕರೆದುದಕ್ಕೆ ದುರ್ಯೋಧನನು ಅವನನ್ನು ಗದರಿಸಿ ಬೈಯಲು ಅವನು ತನ್ನ ಅನುಚಿತ ನಡೆವಳಿಕೆಯನ್ನು ಮನ್ನಿಸಬೇಕೆಂದು ಅವನ ಕಾಲಿಗೆರಗಿ ಬೇಡಿಕೊಂಡನು.

ಎರಡನೆಯ ಸಾರಿ ದುರ್ಯೋಧನನು ದೂತನಾಗಿ ಬಂದವನು ಯಾರೆಂದು ಕೇಳಿ ದಾಗ ಕಂಚುಕಿಯು ಕೇಶವನು ಬಂದಿರುವನೆಂದು ಬಿನ್ನವಿಸಿದನು. ಕೇಶವನು ಆಸ್ಥಾನಕ್ಕೆ ಬಂದಾಗ ಅವನನ್ನು ಹೇಗೆ ಸತ್ಕರಿಸಬೇಕೆಂದು ದುರ್ಯೋಧನನು ಕೇಳಲು, ಸಭಿಕರು ಅವನಿಗೆ ಅರ್ಘ್ಯವನ್ನು ಕೊಟ್ಟು ಪೂಜಿಸಬೇಕೆಂದರು.

ದುರ್ಯೋಧನನು ಅವರ ಅಭಿಪ್ರಾಯವನ್ನು ಒಪ್ಪದೆ "ಇದು ನನಗೆ ರುಚಿಸುವು ದಿಲ್ಲ. ಕೇಶವನನ್ನು ಹಿಡಿದು ಕಟ್ಟಿಹಾಕಬೇಕು. ಹಾಗೆ ಮಾಡುವುದರಿಂದ ಪಾಂಡವರ ಕಣ್ಣನ್ನು ಕಿತ್ತಂತಾಗುತ್ತದೆ. ಆಗ ಪಾಂಡವರು ಗತಿಹೀನರೂ ಮತಿಹೀನರೂ ಆಗುತ್ತಾರೆ. ದಾಯಾದಿಗಳ ಕಾಟವು ತಪ್ಪಿ ಧರೆಯೆಲ್ಲವೂ ನನಗೇ ಸಿಕ್ಕುತ್ತದೆ. ಅಲ್ಲದೆ ಕೇಶವನು ಬಂದಾಗ ಯಾರೂ ಎದ್ದು ನಿಂತು ಅವನಿಗೆ ಮರ್ಯಾದೆಯನ್ನು ತೋರಕೂಡದು. ಇದಕ್ಕೆ ತಪ್ಪಿ ನಡೆದವರು ಹನ್ನೆರಡು ಭಾರ ಚಿನ್ನವನ್ನು ದಂಡವಾಗಿ ಕೊಡಬೇಕಾಗುತ್ತದೆ. ಆದ್ದರಿಂದ ನೀವೆಲ್ಲರೂ ಜಾಗ ರೂಕರಾಗಿರಿ" ಎಂದು ಕಟ್ಟಪ್ಪಣೆ ಮಾಡಿದನು.

ಇನ್ನು ಕೇಶವ ಬಂದಾಗ ತಾನು ಎಳದೆ ಹಾಗೆಯೇ ಕುಳಿತಿರಬೇಕಾದರೆ ಏನು ಮಾಡಬೇಕೆಂದು ಯೋಚಿಸಿ, ದ್ರೌಪದಿಯ ವಸ್ತ್ರಾಪಹರಣದ ಚಿತ್ರವನ್ನು ತರಿಸಿ

ಅವನ್ನೇ ನೋಡುತ್ತ ಅವನು ಬಂದುದನ್ನು ತಾನು ಕಾಣದವನಂತೆ ನಟಿಸಬೇಕೆಂದು ನಿಶ್ಚಯಿಸಿಕೊಂಡನು.

ದುರ್ಯೋಧನನು ಕಂಚುಕಿಯು ತಂದುಕೊಟ್ಟ ದ್ರೌಪದಿಯ ವಸ್ತ್ರಾಪಹರಣದ ಚಿತ್ರಪಟವನ್ನು ಎದುರಿಗಿಟ್ಟುಕೊಂಡು ನೋಡುತ್ತ ಅದರ ಕಲಾ ಪ್ರೌಢಿಮೆಗೆ ಮಾರುಹೋದವನಂತೆ ಅನನ್ಯಮನಸ್ಕನಾಗಿ ಅದನ್ನು ಬಣ್ಣಿಸತೊಡಗಿದನು.

"ಆಹಾ! ಈ ಚಿತ್ರಪಟ ಎಷ್ಟು ಸೊಗಸಾಗಿದೆ! ದುಶ್ಶಾಸನನು ದ್ರೌಪದಿಯ ಮುಡಿ ಹಿಡಿದು ನಿಲ್ಲಿಸಿಕೊಂಡಿದ್ದಾನೆ. ದ್ರೌಪದಿ ಕಳವಳದಿಂದ ಕಣ್ಣು ಬಿಡುತ್ತ ರಾಹುವಿಗೆ ಸಿಕ್ಕಿಬಿದ್ದ ಚಂದ್ರಲೇಖೆಯಂತೆ ಶೋಭಿಸುತ್ತಿದ್ದಾಳೆ! ದುರಾತ್ಮನಾದ ಈ ಭೀಮನಾದರೋ ದ್ರೌಪದಿಯ ಅಪಮಾನದಿಂದ ಕೆರಳಿ ಸಭಾಮಂಟಪದ ಕಂಬವನ್ನು ತೂಗಿ ನೋಡುತ್ತಿದ್ದಾನೆ. ಈ ಯುಧಿಷ್ಠಿರನು ಕಡೆಗಣ್ಣ ಸನ್ನೆಯಿಂದ ಕೋಪಗೊಂಡ ಭೀಮನನ್ನು ಸಂತೈಸುತ್ತಿದ್ದಾನೆ. ಈ ಅರ್ಜುನನು ಕೋಪದಿಂದ ತುಟಿ ನಡುಗುತ್ತಿರಲು ಶತ್ರುಗಳನ್ನು ಲಕ್ಷಿಸದೆ ಗಾಂಡೀವಕ್ಕೆ ಮೆಲ್ಲಗೆ ಕೈಯಿಕ್ಕುತ್ತಿದ್ದಾನೆ. ಈ ನಕುಲ ಸಹದೇವರಾದರೋ ಕತ್ತಿಯನ್ನು ಹಿಡಿದು ಕೋಪದಿಂದ ನೋಡುತ್ತ ಸಿಂಹವನ್ನು ಜಿಂಕೆಯಮರಿಗಳು ತಡೆಯುವಂತೆ ನನ್ನ ತಮ್ಮನನ್ನು ತಡೆಯುತ್ತಿದ್ದಾರೆ. ಯುಧಿಷ್ಠಿರನು ತಮ್ಮಂದಿರ ಬಳಿಗೆ ಹೋಗಿ ತಾನೇ ತಪ್ಪಿತಸ್ಥನೆಂದು ಹೇಳಿ ಶಾಂತರಾಗಲು ಅವರನ್ನು ಬೇಡುತ್ತಿದ್ದಾನೆ. ಈ ಗಾಂಧಾರ ರಾಜನು ಮೋಸದಿಂದ ದಾಳವನ್ನು ಎತ್ತುತ್ತ ಗರ್ವದಿಂದ ನಗುತ್ತಿದ್ದಾನೆ. ಆಚಾರ್ಯ ಮತ್ತು ಪಿತಾಮಹರು ಲಜ್ಜೆಯಿಂದ ಕುಳಿತಿರುವರು. ಆಹಾ, ಈ ಚಿತ್ರ ಎಷ್ಟು ಚೆನ್ನಾಗಿದೆ! ಎಷ್ಟು ಸ್ವಾಭಾವಿಕವಾಗಿ ಸ್ಪಷ್ಟವಾಗಿದೆ!" ಎಂದು ಪ್ರಶಂಸಿಸಿ ದೂತನನ್ನು ಕರೆತರಲು ಅವನು ಕಂಚುಕಿಗೆ ನೇಮಿಸಿದನು.

ಬಳಿಕ ಕರ್ಣನನ್ನು ಕುರಿತು "ಮಿತ್ರ ಕರ್ಣ, ಈ ಕೃಷ್ಣನು ಪಾಂಡವರ ಮಾತನ್ನು ಕೇಳಿಕೊಂಡು ದೂತಕಾರ್ಯಕ್ಕೆ ಬಂದಿದ್ದಾನೆ. ಯುಧಿಷ್ಠಿರನು ಹೇಳಿಕಳಿಸಿರುವ ಹೆಂಗರುಳಿನ ಮೃದು ನುಡಿಗಳನ್ನು ಕೇಳಲು ನಿನ್ನ ಕಿವಿಯನ್ನು ಸಿದ್ಧಪಡಿಸಿಕೊ!" ಎಂದು ದುರ್ಯೋಧನನು ನಕ್ಕು ಹೇಳಿದನು.

ವಾಸುದೇವನು ಕಂಚುಕಿಯೊಡನೆ ಆಸ್ಥಾನಕ್ಕೆ ಬರುತ್ತಾ 'ಧರ್ಮರಾಯನ ನಲುಮೆಯಂತೆ ಕೊಬ್ಬಿ ಶಠನಾಗಿ ಕಾಲ್ಕೆರೆದು ಕದನಕ್ಕೆ ತವಕಿಸುವ ಸುಯೋಧನನೊಡನೆ ಈಗ ನಾನು ದೂತಕಾರ್ಯವನ್ನು ನಿರ್ವಹಿಸಬೇಕಾಗಿದೆ. ಆದರೆ ದ್ರೌಪದಿಯ

ಮಾನಭಂಗದ ಉರಿ, ಭೀಮನ ಕೋಪದುರಿ, ಧನಂಜಯನ ಬಾಣಗಳ ಬಿರುಗಾಳಿ ಇವು ಒಟ್ಟಿಗೆ ಕೂಡಿಕೊಂಡು ಪ್ರಜ್ವಲಿಸಲು ಕುರುವಂಶವು ಸುಟ್ಟು ಬೂದಿಯಾಗುವುದು' ಎಂದು ತನ್ನಲ್ಲೇ ಅಂದುಕೊಂಡನು.

ಕೌರವನ ಅರಮನೆಯ ಶಸ್ತ್ರಶಾಲೆ, ಗಜಾಶ್ವಶಾಲೆ, ಐಶ್ವರ್ಯ, ವೈಭವಗಳನ್ನು ನೋಡುತ್ತಾ ಈ ಐಶ್ವರ್ಯಕ್ಕೆಲ್ಲ ನಾಶ ಕಾದಿದೆಯೆಂದುಕೊಳ್ಳುತ್ತಾ ಕೃಷ್ಣನು ಆಸ್ಥಾನವನ್ನು ಪ್ರವೇಶಿಸಿದನು.

ಕೃಷ್ಣನು ತನ್ನನ್ನು ನೋಡಿ ಗಾಬರಿಯಿಂದ ಆಸನದಿಂದೆದ್ದ ಕ್ಷತ್ರಿಯರಿಗೆ "ನೀವೆಲ್ಲರೂ ಧಾರಾಳವಾಗಿ ಕುಳಿತುಕೊಳ್ಳಬಹುದು" ಎಂದು ಹೇಳಿ ತಾನು ಮುಂದೆ ಹೋದನು.

ದುರ್ಯೋಧನನು ಕೃಷ್ಣನನ್ನು ನೋಡದವನಂತೆ ಕುಳಿತಿದ್ದು ತನ್ನ ಆಜ್ಞೆಯನ್ನು ಮೀರಿ ಮೇಲೆದ್ದು ಕೃಷ್ಣನಿಗೆ ಗೌರವವನ್ನು ತೋರಿಸಿದ ಕ್ಷತ್ರಿಯರನ್ನು ಕ್ರೂರವಾಗಿ ದಿಟ್ಟಿಸುತ್ತಾ "ಏನೇನು ? ಎಲ್ಲರೂ ಗಾಬರಿಯಾದರೆ ! ಸಾಕು ನಿಮ್ಮ ಈ ಸಂಭ್ರಮ ! ನಾನು ವಿಧಿಸಿದ ದಂಡವು ನೆನಪಿರಲಿ" ಎಂದು ನಿಷ್ಠುರನಾಗಿ ಎಚ್ಚರಿಸಿದನು.

ಕೃಷ್ಣನು ದುರ್ಯೋಧನನ ಸಿಂಹಾಸನದ ಮುಂದಕ್ಕೆ ಹೋಗಿ "ಏನಯ್ಯಾ ಸುಯೋಧನ, ಕುಳಿತುಕೊಂಡೆ" ಎಂದು ತಾನೇ ಅವನನ್ನು ಮಾತನಾಡಿಸಿದನು. ಕೂಡಲೇ ಕೃಷ್ಣನನ್ನು ಕಂಡೂ ಕಾಣದವನಂತೆ ಕುಳಿತಿದ್ದ ದುರ್ಯೋಧನನು ಸಿಂಹಾಸನದಿಂದ ಕೆಳಕ್ಕುರುಳಿ ಬಿದ್ದು ತಡವರಿಸಿಕೊಂಡು ಮೇಲೆದ್ದು 'ಕೇಶವನು ಬಂದನೆಂಬುದು ಗೊತ್ತಾಯಿತು. ಈ ಮಾಯಕಾರನ ಮಹಿಮೆಯಿಂದ ನನಗೆ ಹೀಗಾಯಿತು. ಈ ದೂತನು ಬಲು ಮಾಯಾವಿ' ಎಂದು ತನ್ನಲ್ಲಿ ಅಂದುಕೊಂಡನು.

"ಅಯ್ಯಾ ದೂತ, ಈ ಆಸನದಲ್ಲಿ ಕುಳಿತುಕೊ" ಎಂದು ಪೀಠವೊಂದನ್ನು ಕೃಷ್ಣನಿಗೆ ತೋರಿ ಮತ್ತೆ ಸಿಂಹಾಸನದಲ್ಲಿ ಕೌರವನು ಕುಳಿತುಕೊಂಡನು. ಕೃಷ್ಣನು ದ್ರೋಣಾದಿಗಳನ್ನೆಲ್ಲ ಕುಳಿತುಕೊಳ್ಳಲು ವಿನಯದಿಂದ ವಿನಂತಿಸಿ ತಾನೂ ಕುಳಿತುಕೊಂಡನು.

ದ್ರೌಪದಿಯ ವಸ್ತ್ರಾಪಹರಣದ ಚಿತ್ರವು ದುರ್ಯೋಧನನ ಮುಂದೆ ಹಿಂದಿನಂತೆಯೇ ತೆರೆದು ಬಿದ್ದಿತ್ತು.

ಕೃಷ್ಣನು ಅದನ್ನು ನೋಡಿ ಜಿಗುಪ್ಸೆಯಿಂದ "ಆಹಾ! ಏನಿದು? ಈ ದುರ್ಯೋಧನನು ಸ್ವಜನರಿಗೆ ಮಾಡಿದ ಅಪಮಾನವನ್ನೇ ಪರಾಕ್ರಮವೆಂದು ತಿಳಿದಿದ್ದಾನೆ. ತನ್ನ ದೋಷವನ್ನು ಹೀಗೆ ಸಭೆಯಲ್ಲಿ ಎತ್ತಿ ತೋರುವವರು ಯಾರಿದ್ದಾರೆ! ಸಾಕು ಸಾಕು, ಈ ಪಟವನ್ನು ಇಲ್ಲಿಂದ ತೆಗೆದಿರಿಸಿ" ಎಂದನು.

ದುರ್ಯೋಧನನು ಈ ಪಟವನ್ನು ತೆಗೆದಿರಿಸಲು ಕಂಚುಕಿಗೆ ಆಜ್ಞಾಪಿಸಿ ಕೃಷ್ಣನನ್ನು ಕುರಿತು ಅಯ್ಯಾ ದೂತ, ಪಾಂಡವರೆಲ್ಲ ಸುಖವಾಗಿದ್ದಾರೆಯೇ?" ಎಂದನು.

ಕೃಷ್ಣನು ಪಾಂಡವರು ಕುಶಲವಾಗಿರುವರೆಂದು ಹೇಳಿ "ಇದುವರೆಗೆ ದುಃಖಪಟ್ಟದ್ದಾಯಿತು. ಈಗ ವನವಾಸದ ಸಮಯ ಮುಗಿಯಿತು. ಇನ್ನು ನ್ಯಾಯವಾಗಿ ನಮಗೆ ಬರಬೇಕಾದ ದಾಯಾದವನ್ನು ಹಂಚಿಕೊಡಬೇಕು ಎಂದು ಧರ್ಮರಾಯನು ವಿಜ್ಞಾಪಿಸುತ್ತಾನೆ" ಎಂದು ತಿಳಿಸಿದನು.

"ಏನೇನು. ದಾಯಾದವೆ? ಕಾಡಿನಲ್ಲಿ ಬೇಟೆಯಾಡುತ್ತ ನಮ್ಮ ಚಿಕ್ಕಪ್ಪನು ಮುನಿಯ ಶಾಪಕ್ಕೆ ಗುರಿಯಾದನು. ಅಂದಿನಿಂದ ಅವನು ತನ್ನ ಹೆಂಡತಿಯರನ್ನು ತೊರೆದಿದ್ದನು. ಅವನು ಹೇಗೆ ಬೇರೆ ಮಕ್ಕಳಿಗೆ ತಂದೆಯಾಗುವನು?" ದುರ್ಯೋಧನನು ಪರಿಹಾಸದಿಂದ ಪ್ರಶ್ನಿಸಿದನು.

"ಹಾಗೋ! ನಾನೂ ನಿನ್ನನ್ನು ಒಂದು ಮಾತು ಕೇಳುತ್ತೇನೆ. ವಿಷಯಾಸಕ್ತನಾದ ವಿಚಿತ್ರವೀರ್ಯನು ಕ್ಷಯದಿಂದ ಸಾಯಲು ಅಂಬಿಕೆಯ ಹೊಟ್ಟೆಯಲ್ಲಿ ವ್ಯಾಸನಿಂದ ಹುಟ್ಟಿದ ನಿನ್ನ ತಂದೆಗೆ ರಾಜ್ಯ ಹೇಗೆ ದೊರಕುವುದು ಹೇಳು? ಹೀಗೆಯೇ ಎರಡು ವಂಶದವರು ವಿರೋಧವನ್ನು ಬೆಳೆಸಿದರೆ ಕುರುಕುಲ ನಾಶವಾಗುವುದು. ಆದ್ದರಿಂದ ದುರ್ಯೋಧನಾ, ಪಾಂಡವರು ಹೇಳುವ ಒಳ್ಳೆಯ ಮಾತುಗಳನ್ನು ಕೇಳು" ಕೃಷ್ಣನು ಉತ್ತರಿಸಿದನು.

ಮರುಮಾತಾಡಲು ದುರ್ಯೋಧನನಿಗೆ ಏನೂ ತೋರಲಿಲ್ಲ. ಅವನು ಎಸೆದ ವಾಗ್ಬಾಣವು ಅವನನ್ನೇ ಇರಿಯಿತು.

"ಎಲವೋ ದೂತ, ನಿನಗೆ ರಾಜವ್ಯವಹಾರವು ತಿಳಿಯದು. ಹಗೆಗಳನ್ನು ಗೆದ್ದ ಶೂರರಿಗೆ ಮಾತ್ರ ರಾಜ್ಯ ಲಭಿಸುವುದು. ಅದು ಬೇಡುವುದರಿಂದ ದೊರಕುವುದಿಲ್ಲ. ದೀನರಿಗೆ ಅದನ್ನು ಕೊಡಲಾಗದು. ರಾಜ್ಯದಾಸೆಯಿದ್ದರೆ ಪಾಂಡವರು ಪರಾಕ್ರಮವನ್ನು ತೋರಲಿ. ಇಲ್ಲದಿದ್ದರೆ ಅವರು ಆಶ್ರಮಕ್ಕೆ ಹೋಗಲಿ" ಮಾತನ್ನು ಆಲಿಸಿ ಕೇಶವನು ದರ್ಪದಿಂದ ನುಡಿದನು.

ಕೃಷ್ಣನು "ಅಯ್ಯಾ ಸುಯೋಧನ, ನೀನು ಸ್ವಜನರನ್ನು ದ್ವೇಷಿಸಬೇಡ. ಪುಣ್ಯದಿಂದ ಸಾಮ್ರಾಜ್ಯ ಪದವಿ ದೊರೆತಿರುವಾಗ ತಮ್ಮ ಬಂಧುಮಿತ್ರರನ್ನು ಯಾರೇ ವಂಚಿಸಿದರೂ ಅವರಿಗೆ ಒಳ್ಳೆಯದಾಗುವುದಿಲ್ಲ" ಎಂದನು.

ದುರ್ಯೋಧನನು ವ್ಯಂಗ್ಯವಾಗಿ "ನಿನ್ನ ಮಾವನಾದ ಕಂಸನ ಮೇಲೆಯೇ ನಿನಗೆ ದಯೆ ಬರಲಿಲ್ಲ! ಇನ್ನು ನಿತ್ಯಾಪಕಾರಿಗಳಾದ ಪಾಂಡವರ ಮೇಲೆ ನನಗೆ ಹೇಗೆ ದಯೆ ಬರಬೇಕು?" ಎಂದು ಪ್ರಶ್ನಿಸಿದನು.

ಕೃಷ್ಣನು ಉತ್ತರ ಹೇಳಿದನು. "ಅದು ಅವನ ಕರ್ಮ. ಮಕ್ಕಳನ್ನು ಕೊಂದು, ನನ್ನ ತಾಯಿಯನ್ನು ಅವನು ಹಿಂಸಿಸಿ, ತನ್ನ ತಂದೆಯನ್ನೇ ಸೆರೆಯಲ್ಲಿಡಲು ಅವನನ್ನು ಮೃತ್ಯುವೇ ಕೊಂದಿತು."

"ನಿನ್ನನ್ನು ನೀನೇ ಹೀಗೆ ಹೊಗಳಿಕೊಳ್ಳುವುದನ್ನಿನ್ನು ಸಾಕುಮಾಡು. ಕಂಸನ ಮಾವನಾದ ಮಗಧೇಶನು ಅಂದು ಕೋಪದಿಂದ ಗರ್ಜಿಸಿದಾಗ ನೀನು ಏಕೆ ಓಡಿ ಹೋದೆ? ಆಗ ನಿನ್ನ ಶೌರ್ಯ ಎಲ್ಲಿ ಹೋಗಿತ್ತು?" ದುರ್ಯೋಧನನು ಕೇಳಿದನು.

"ಅಯ್ಯಾ ದುರ್ಯೋಧನ, ವಿವೇಕಿಯಾದವನು ದೇಶಕಾಲಾವಸ್ಥೆಗಳನ್ನು ನೋಡಿ ತಾನೆ ಶೌರ್ಯವನ್ನು ತೋರಬೇಕು? ನಿನ್ನ ಪರಿಹಾಸ್ಯವನ್ನು ಸಾಕುಮಾಡು. ಇನ್ನಾದರೂ ಸೋದರರ ದೋಷವನ್ನು ಮರೆತು ಅವರಿಗೆ ರಾಜ್ಯವನ್ನು ಕೊಟ್ಟುಬಿಡು. ಬಂಧುಗಳ ಸಂಬಂಧವು ಇಹಪರಗಳೆರಡಕ್ಕೂ ಒಳ್ಳೆಯದಾಗುವುದು" ಕೃಷ್ಣನು ಶಾಂತನಾಗಿಯೆ ನುಡಿದನು.

"ದೇವಸುತರಾದ ಅವರಿಗೂ ನರನಾದ ನನಗೂ ಸಂಬಂಧವೆಲ್ಲಿ ಬಂತು! ಇನ್ನು ಆ ಮಾತನ್ನು ಆಡಬೇಡ" ದುರ್ಯೋಧನನು ಕಠೋರವಾಗಿ ಹೇಳಿದನು.

ಕೃಷ್ಣನ ಬುದ್ಧಿಯ ಮಾತುಗಳು ದುರ್ಯೋಧನನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ. ಆದ್ದರಿಂದ ಅವನನ್ನು ಹೆದರಿಸಿ ನೋಡ ಬೇಕೆಂದು ಕೃಷ್ಣನು ಯೋಚಿಸಿ—"ಅರ್ಜುನನ ಪರಾಕ್ರಮ ನಿನಗೆ ತಿಳಿಯದೆ? ಅವನು ಕಿರಾತವೇಷಧಾರಿಯಾದ ಶಿವನನ್ನು ಯುದ್ಧದಲ್ಲಿ ಮೆಚ್ಚಿಸಿದನು. ಇಂದ್ರನನ್ನೂ ಲೆಕ್ಕಿಸದೆ ಅವನು ಖಾಂಡವ ವನವನ್ನು ಸುಟ್ಟನು. ಅವನೊಬ್ಬನೇ ಗೋಗ್ರಹಣದಲ್ಲಿ ಭೀಷ್ಮಾದಿಗಳನ್ನೆಲ್ಲ ಗೆದ್ದನು. ಅಷ್ಟೇ ಅಲ್ಲ, ಚಿತ್ರಸೇನನು ನಿನ್ನನ್ನು ಸೆರೆಹಿಡಿದೊಯ್ಯುವಾಗ ನಿನ್ನನ್ನು ಬಿಡಿಸಿದವನು ಅರ್ಜುನನಲ್ಲವೆ? ಸುಮ್ಮನೆ

ನನ್ನ ಮಾತನ್ನು ಕೇಳು. ಇಲ್ಲದಿದ್ದರೆ ಧರೆಯನ್ನೆಲ್ಲ ಅವರೇ ಗೆದ್ದುಕೊಳ್ಳುವರು" ಎಂದನು.

ದುರ್ಯೋಧನನು ಕೋಪಿಸಿಕೊಂಡು "ಭೀಮನ ರೂಪದಿಂದ ಮಾರುತನೇ ಹೊಡೆಯಲಿ, ಅರ್ಜುನನ ರೂಪದಿಂದ ಇಂದ್ರನೇ ಸೆಣಸಲಿ. ಪಾಂಡವರಿಗೆ ನಾನು ಒಂದು ಹುಲ್ಲೆಸಳನ್ನೂ ಕೊಡುವುದಿಲ್ಲ" ಎಂದು ತನ್ನ ದೃಢ ನಿರ್ಧಾರವನ್ನು ಘೋಷಿಸಿದನು. ಮತ್ತೆ ಅವನು "ನೀನು ಹೆಂಗಸು, ಕುದುರೆ, ಗೂಳಿ, ಜಟ್ಟಿಗಳನ್ನು ಕೊಂದು ಲಜ್ಜೆಯಿಲ್ಲದೆ ಸಾಧುಗಳ ಜೊತೆಯಲ್ಲಿ ಹೇಗೆ ಮಾತನಾಡುವೆ! ಮೂರ್ಧಾಭಿಷಿಕ್ತನಾಗಿರುವ ನಾನು ನಿನ್ನಂಥವನೊಡನೆ ಮಾತನಾಡಲಾರೆ" ಎಂದು ಹೇಳಿ ಬೇರೆ ಕಡೆಗೆ ತಿರುಗಿಕೊಂಡನು.

"ನೀನು ದುಷ್ಟ, ಮೂರ್ಖ. ನಿನ್ನಿಂದ ಕುರುವಂಶವು ಬೇಗನೆ ನಾಶವಾಗುವುದರಲ್ಲಿ ಸಂದೇಹವಿಲ್ಲ. ಇನ್ನು ನಾನು ಹೋಗುತ್ತೇನೆ" ಪೀಠದಿಂದಿಳಿದು ಕೃಷ್ಣನು ಹೊರಟು ನಿಂತನು.

ಕೃಷ್ಣನನ್ನು ಬಂಧಿಸಲು ಯೋಚಿಸಿದ್ದ ಕೌರವನು ಕೂಡಲೆ ದುಶ್ಶಾಸನನೆ ಮೊದಲಾದ ತನ್ನ ತಮ್ಮಂದಿರಿಗೆ "ದೂತಸಮುದಾಚಾರವನ್ನು ಮೀರಿರುವ ಇವನನ್ನು ಹಗ್ಗದಿಂದ ಕಟ್ಟಿರಿ" ಎಂದು ಆಜ್ಞಾಪಿಸಿದನು.

ಕೃಷ್ಣನನ್ನು ಕಟ್ಟಲು ಅವರಿಂದಾಗದಿರಲು ದುರ್ಯೋಧನನು ತನ್ನ ಮಾವನಾದ ಶಕುನಿಗೆ ಹೇಳಿದನು. ಅವನಿಂದಲೂ ಆಗದಿರಲು ದುರ್ಯೋಧನನೇ ಕೇಶವನನು ಕಟ್ಟಲು ಹಗ್ಗವನ್ನು ತೆಗೆದುಕೊಂಡು ಹೋದನು.

ಕೇಶವನು "ದುರ್ಯೋಧನನು ನನ್ನನ್ನು ಕಟ್ಟಿಹಾಕಲು ಬಯಸುತ್ತಾನಲ್ಲವೆ? ಆಗಲಿ, ಇವನ ಸಾಮರ್ಥ್ಯವನ್ನು ನೋಡುತ್ತೇನೆ" ಎಂದು ತನ್ನ ವಿಶ್ವರೂಪವನ್ನು ಧರಿಸಿದನು.

"ಎಲಾ ದೂತ, ನಿನ್ನ ಮಾಯೆಗಳನ್ನೆಲ್ಲಾ ತೋರಿಬಿಡು. ನಿನ್ನ ದೇವಾಯುಧಗಳನ್ನೆಲ್ಲಾ ಹಿಡಿದು ನನ್ನನ್ನು ಹೊಡೆ. ನಿನ್ನನ್ನೀಗಲೇ ನಾನು ಬಂಧಿಸುತ್ತೇನೆ" ಎನ್ನುತ್ತ ದುರ್ಯೋಧನನು ಕೃಷ್ಣನನ್ನು ಕಟ್ಟಲು ಮುಂದೆ ಹೋದನು.

ಒಮ್ಮೆ ದುರ್ಯೋಧನನಿಗೆ ಕೃಷ್ಣನು ಕಾಣಿಸುತ್ತಿದ್ದನು. ಮತ್ತೊಮ್ಮೆ ಕಾಣದಾದನು. ಒಮ್ಮೆ ಕುಬ್ಜಾಕಾರನಾಗಿಯೂ ಮಗುದೊಮ್ಮೆ ದೀರ್ಘಕಾಯನಾಗಿಯೂ ಪ್ರತ್ಯಕ್ಷನಾದನು. ಅನಂತರ ಎಲ್ಲೆಲ್ಲೂ ಕೃಷ್ಣನೇ ಕಾಣಿಸಿಕೊಂಡನು.

ದುರ್ಯೋಧನನು "ಎಲ್ಲ ರಾಜರೆ, ಒಬ್ಬೊಬ್ಬ ಕೇಶವನನ್ನು ಕಟ್ಟಿಬಿಡಿ" ಎಂದನು. ಕ್ಷತ್ರಿಯರು ಕೃಷ್ಣನನ್ನು ಕಟ್ಟಲು ಹೋಗಿ ತಮ್ಮನ್ನು ತಾವೇ ಬಿಗಿದುಕೊಂಡು ಬೀಳತೊಡಗಿದರು. ಎಂತಾದರೂ ಕೇಶವನನ್ನು ಕಟ್ಟಲಾಗದಿದ್ದುದರಿಂದ ದುರ್ಯೋಧನನು ಕೃಷ್ಣನನ್ನು ಕೊಂದುಬಿಡಬೇಕೆಂದು ಧನುಸ್ಸನ್ನು ತರಲು ಹೋದನು.

"ಪಾಂಡವರ ಕಾರ್ಯವನ್ನು ನಾನೇ ಮಾಡಿಬಿಡಬೇಕು" ಕೃಷ್ಣನು ಹೀಗೆನ್ನುತ್ತಾ ಸುದರ್ಶನ ಚಕ್ರವನ್ನು ಸ್ಮರಿಸಿದನು.

ಸುದರ್ಶನನು ವಿದ್ಯುದ್ವೇಗದಿಂದ ಬರುತ್ತಾ 'ಭಗವಂತನಾದ ನಾರಾಯಣನ ಆಜ್ಞೆಯನ್ನು ಕೇಳಿ ನಾನೀಗ ಓಡಿಬಂದೆ. ಭಗವಂತನು ಹೀಗೆ ಯಾರಮೇಲೆ ಕೋಪಗೊಂಡಿರುವನೋ ? ಯಾರಮೇಲೆ ನಾನು ಎರಗಬೇಕೋ ?' ಎಂದು ಕೊಂಡು ಹಸ್ತಿನಾಪುರದ ಬಾಗಿಲಿನಲ್ಲಿ ದೂತನಿಗೆ ತಕ್ಕ ರೀತಿಯಲ್ಲಿ ನಿಂತಿದ್ದ ಕೃಷ್ಣನಿಗೆ ಬಂದು ನಮಸ್ಕರಿಸಿದನು. ಸುದರ್ಶನನನ್ನು ನೋಡಿ ಕೃಷ್ಣನಿಗೆ ಆನಂದವಾಯಿತು. ಸುದರ್ಶನನು ತನಗೆ ಕಾರ್ಯವನ್ನು ಆಜ್ಞಾಪಿಸಲು ಅವ ನನ್ನು ಬೇಡಿಕೊಂಡನು.

ಕೃಷ್ಣನು "ಎಲಾ ಸುಯೋಧನ, ನೀನು ಸಮುದ್ರದಲ್ಲಿ ಮುಳುಗು, ಗಿರಿಯ ಗುಹೆ ಯಲ್ಲಿ ಅಡಗು, ಇಲ್ಲವೆ ವಾಯು ಮಾರ್ಗದಲ್ಲಿ ಅವಿತುಕೊ. ಈ ಚಕ್ರದಿಂದ ಇನ್ನು ನಿನಗೆ ಬಿಡುಗಡೆಯಿಲ್ಲ. ಕಾಲಚಕ್ರದಂತೆ ಇದು ನಿನ್ನನ್ನು ಕೊಲ್ಲುವುದು" ಎಂದನು.

ಸುದರ್ಶನನು ಸ್ವಲ್ಪ ಯೋಚಿಸಿ, "ದೇವ, ಭೂಭಾರವನ್ನಿಳುಹಲು ನೀನು ಅವ ತರಿಸಿರುವೆ. ಹೀಗೆ ಸುಯೋಧನನು ಸತ್ತರೆ ನಿನ್ನ ಶ್ರಮವು ವ್ಯರ್ಥವಾಗುವುದಿ ಲ್ಲವೆ ?" ಎಂದನು.

ಕೃಷ್ಣನ ಕೋಪ ಇಳಿಯಿತು. "ನಾನು ರೋಷದಿಂದ ಸದಾಚಾರವನ್ನು ನೋಡಲಿಲ್ಲ. ಈಗ ನಿನ್ನ ಸ್ಥಳಕ್ಕೆ ಹೋಗು" ಕೃಷ್ಣನು ಶಾಂತನಾಗಿ ಅವನಿಗೆ ಆಜ್ಞೆ ಮಾಡಿದನು. ಸುದರ್ಶನನು ಅಲ್ಲಿಂದ ಮರಳಿದನು.

ಅಷ್ಟರಲ್ಲಿ ಭಗವಂತನ ಆಯುಧಗಳಾದ ಶಾರ್ಙ್ಗ, ಕೌಮೋದಕಿ, ಪಾಂಚಜನ್ಯ ಮತ್ತು ವಾಹನನಾದ ಗರುಡನೂ ರಭಸದಿಂದ ಕೃಷ್ಣನ ಬಳಿಗೆ ಬರುತ್ತಿದ್ದರು. ಭಗವಂತನಾದ ನಾರಾಯಣನ ರೋಷವು ಶಾಂತವಾದುದರಿಂದ ಅವುಗಳಿಗೆ ಹಿಂದಿರುಗಲು ಹೇಳಿ ಕಳುಹಿಸಿ ಸುದರ್ಶನನು ತನ್ನ ಸ್ಥಳಕ್ಕೆ ಹೊರಟುಹೋದನು.

ಕೃಷ್ಣನು ಪಾಂಡವರ ಶಿಬಿರಕ್ಕೆ ಹೊರಡಲನುವಾದನು. ಧೃತರಾಷ್ಟ್ರನು ಅವನನ್ನು ಹೋಗಬೇಡವೆಂದು ದೈನ್ಯದಿಂದ ಬೇಡುತ್ತಾ ಬಂದು ಅವನ ಕಾಲಿಗೆರಗಿ ತನ್ನ ಮಗನ ತಪ್ಪನ್ನು ಕ್ಷಮಿಸಲು ಬೇಡಿಕೊಂಡನು. ಬಳಿಕ ಧೃತರಾಷ್ಟ್ರನು ಕೊಟ್ಟ ಅರ್ಘ್ಯಪಾದ್ಯಾದಿಗಳನ್ನು ಕೃಷ್ಣನು ಸ್ವೀಕರಿಸಿ ತನ್ನ ದೂತಕಾರ್ಯವನ್ನು ಮುಗಿಸಿ ಪಾಂಡವರ ಶಿಬಿರಕ್ಕೆ ಹೊರಟುಹೋದನು.

---

## ದೂತ ಘಟೋತ್ಕಚ

ಮಹಾಭಾರತ ಯುದ್ಧವು ಅನಿವಾರ್ಯವಾಯಿತು. ಹತ್ತು ದಿನಗಳ ಕಾಲ ಭೀಷ್ಮನು ಶೌರ್ಯದಿಂದ ಕಾದಾಡಿ ಕಡೆಗೆ ಶರಶಯ್ಯೆಯಲ್ಲಿ ಮಲಗಿದನು. ದುರ್ಯೋಧನನು ಹನ್ನೊಂದನೆಯ ದಿನ ದ್ರೋಣಾಚಾರ್ಯನಿಗೆ ಸೇನಾಧಿಪತ್ಯವನ್ನು ವಹಿಸಿದನು.

ಯುದ್ಧವು ಪ್ರಾರಂಭವಾದಾಗಿನಿಂದ ಕೌರವನಿಗೆ ಸೋಲಿನ ಮೇಲೆ ಸೋಲಾಗುತ್ತಿದ್ದುವು. ಆದ್ದರಿಂದ ದ್ರೋಣನು ದುರ್ಯೋಧನನಿಗೆ ಜಯವನ್ನು ಸಂಪಾದಿಸಿಕೊಡಬೇಕೆಂದು ಹದಿಮೂರನೆಯ ದಿನ ದುರ್ಭೇದವಾದ ಪದ್ಮವ್ಯೂಹವನ್ನು ರಚಿಸಿದನು. ಅರ್ಜುನನು ಸಂಶಪ್ತಕರೊಡನೆ ಯುದ್ಧಮಾಡಲು ಹೋಗಿದ್ದುದರಿಂದ ವೀರಕುಮಾರನಾದ ಅಭಿಮನ್ಯುವು ಪದ್ಮವ್ಯೂಹವನ್ನು ಭೇದಿಸಿ ತಾನೊಬ್ಬನೇ ಅತಿರಥ ಮಹಾರಥರೊಡನೆ ಕಾದಾಡಿ ಕೊನೆಗೆ ವೀರಸ್ವರ್ಗವನ್ನು ಸೇರಿದನು.

ಅಂದಿನ ಯುದ್ಧವು ಮುಗಿಯಿತು. ಪಾಂಡವರ ಸೈನ್ಯವು ಕಂಗೆಟ್ಟು ಓಡಿತು. ಜಯದಿಂದ ಕೌರವನ ಪಕ್ಷದವರು ಬೀಗುತ್ತಾ ತಮ್ಮ ತಮ್ಮ ಶಿಬಿರಕ್ಕೆ ಹೋದರು

ಕೌರವರ ಶಿಬಿರದಲ್ಲೆಲ್ಲ ಅಭಿಮನ್ಯುವಿನ ವಧೆ ತಿಳಿಯಿತು. ಘಟೋತ್ಕಚನು ಧೃತರಾಷ್ಟ್ರನ ಶಿಬಿರಕ್ಕೆ ಹೋಗಿ ಅಭಿಮನ್ಯುವಿನ ವಧೆಯನ್ನು ಧೃತರಾಷ್ಟ್ರ ಮಹಾರಾಜನಿಗೆ ವಿಜ್ಞಾಪಿಸಿರೆಂದು ಕೂಗಿಕೊಳ್ಳುತ್ತಿದ್ದನು. ಘಟನ ಮಾತು ಶಿಬಿರದೊಳಗಿದ್ದ ಧೃತರಾಷ್ಟ್ರನಿಗೆ ಕೇಳಿಸಿತು.

ಅವನು "ಯಾರವನು, ಅಪ್ರಿಯವನ್ನು ಪ್ರಿಯವೆಂದು ಹೇಳುತ್ತಿದ್ದಾನೆ ? ಯಾರವನು, ಶಿಶುಪಥೆಯ ಪಾಪದಿಂದುಂಟಾದ ನಮ್ಮ ವಂಶ ಕ್ಷಯವನ್ನು ಹೆದರದೆ ಘೋಷಿಸುತ್ತಿದ್ದಾನೆ ?" ಎಂದು ಶೋಕದಿಂದ ಕೇಳುತ್ತ ಗಾಂಧಾರಿ ಮತ್ತು ದುಶ್ಶಳೆಯೊಡನೆ ಮುಂದಕ್ಕೆ ಬಂದನು.

"ಗಾಂಧಾರಿ, ಕೇಳು. ಈಗ ಅಭಿಮನ್ಯುವಿನ ಮರಣದಿಂದ ಅರ್ಜುನನು ಕೃಷ್ಣನನ್ನು ಕೂಡಿಕೊಂಡು ಶತ್ರುಗಳನ್ನು ಸಂಹರಿಸುವನು. ಅವನ ಕೋಪಕ್ಕೆ ಲೋಕವೇ ನಾಶವಾಗುವುದು" ಧೃತರಾಷ್ಟ್ರನು ಗಾಂಧಾರಿಗೆ ಹೇಳಿದನು.

ಮಕ್ಕಳು ಮರಿಗಳನ್ನು ನಾಶಗೊಳಿಸುವ ಕುಲ ಯುದ್ಧವು ಬೇಡವೆಂದು ಗಾಂಧಾರಿಯು ಮೊದಲೇ ಹೇಳಿದ್ದಳು. ತನ್ನ ಎಣಿಕೆಯಂತೆಯೇ ಅಭಿಮನ್ಯುವು ಸತ್ತನೆಂದು ತಿಳಿದಾಗ ಅವಳ ಶೋಕ ಎಲ್ಲೆ ಮೀರಿತು. "ಹಾ ! ಅಭಿಮನ್ಯು, ನಮ್ಮನ್ನು ಬಿಟ್ಟು ನೀನೆಲ್ಲಿಗೆ ಹೋದೆ ?" ಎಂದು ಅವಳು ದುಃಖಿಸಿದಳು.

ದುಶ್ಶಳೆಯು "ಯಾವನು ಉತ್ತರೆಗೆ ವೈಧವ್ಯವನ್ನು ತಂದನೋ ಅವನು ತನ್ನ ಹೆಂಡತಿಯರಿಗೂ ವೈಧವ್ಯವನ್ನು ತಂದುಕೊಂಡನೆನ್ನುವುದರಲ್ಲಿ ಸಂದೇಹವಿಲ್ಲ !" ಎಂದಳು, ಉತ್ತರೆಯ ಮೇಲಿನ ಸಹಾನುಭೂತಿಯಿಂದ. ಆದರೆ ಅವರ್ಯಾರಿಗೂ ಅಭಿಮನ್ಯುವನ್ನು ಕೊಂದವನು ಯಾರೆಂದು ತಿಳಿಯದು.

ಧೃತರಾಷ್ಟ್ರನು ಕೂಗಿಕೊಂಡವನು ಯಾರೆಂದು ಮತ್ತೆ ಕೇಳಿದನು. ಭಟನು ಮುಂದೆ ಬಂದು ಅವನಿಗೆ ಕಾಣಿಸಿಕೊಂಡನು.

ಧೃತರಾಷ್ಟ್ರನು "ಅಭಿಮನ್ಯುವನು ಯಾರು ಕೊಂದವರು ? ಯಾರಿಗೆ ಪ್ರಾಣವು ಬೇಡವಾಯಿತು ? ಪಾಂಡವರ ಕೋಪಾಗ್ನಿಗೆ ಯಾರು ಬಲಿಯಾದರು ?" ಎಂದು ಭಟನನ್ನು ಕೇಳಿದನು

ಭಟನು ಅನೇಕ ರಾಜರು ಒಟ್ಟಿಗೆ ಸೇರಿಕೊಂಡು ಅಭಿಮನ್ಯುವನ್ನು ಕೊಂಡರೆಂದೂ ಜಯದ್ರಥನು ಮುಖ್ಯ ಕಾರಣನಾದನೆಂದೂ ಬಿನ್ನವಿಸಿದನು.

ಧೃತರಾಷ್ಟ್ರನು ಹತ್ತಿರದಲ್ಲಿ ದುಶ್ಶಳೆ ಇರುವುದನ್ನು ಅರಿಯದೆ "ಅಯ್ಯೋ ! ಜಯದ್ರಥನು ಕಾರಣನಾದನೆ ? ಇನ್ನವನು ನಾಶವಾದಂತೆ" ಎಂದು ಮುಂದೆ ಆಗಬಹುದಾದುದನ್ನು ಊಹಿಸಿ ಹೇಳಿಬಿಟ್ಟನು.

ತನ್ನ ಪತಿಯೇ ಅಭಿಮನ್ಯುವಿನ ವಧೆಗೆ ಕಾರಣನಾದನೆಂಬುದನ್ನು ತಿಳಿದ ದುಶ್ಶಳೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಧೃತರಾಷ್ಟ್ರನು ಅಳುವವಳು ಯಾರೆಂದು ಕೇಳಲು ಪ್ರತೀಹಾರಿಯು "ರಾಜಪುತ್ರಿ ದುಶ್ಶಳೆ ಅಳುತ್ತಿರುವಳು" ಎಂದನು.

ಧೃತರಾಷ್ಟ್ರನು "ಮಗಳೇ, ಅಳಬೇಡ. ನಿನ್ನ ಗಂಡನು ತಾನೇ ಅರ್ಜುನನ ಬಾಣಗಳಿಗೆ ಗುರಿಯಾಗಿ ನಿಂತಿರುವುದರಿಂದ ನೀನು ಸುಮಂಗಲಿಯಾಗಿರುವುದು ಅವನಿಗೆ ಇಷ್ಟವಿಲ್ಲವೆಂದು ತೋರುತ್ತದೆ" ಎಂದನು.

ದುಶ್ಶಳೆಯು ಉತ್ತರೆಯ ಬಳಿಗೆ ತಾನೂ ಹೋಗಿ, ಸಹಗಮನದ ಉಡುಪನ್ನು ಧರಿಸಿ ಸಹಗಮನಕ್ಕೆ ಸಿದ್ಧಳಾಗಲು ತಂದೆಯ ಅನುಮತಿಯನ್ನು ಬೇಡಿದಳು.

ಇನ್ನೂ ಜಯದ್ರಥನು ಬದುಕಿರುವುದರಿಂದ ಅಮಂಗಳವನ್ನಾಡಬೇಡವೆಂದು ಗಾಂಧಾರಿಯು ಮಗಳನ್ನು ತಡೆದು ಸಮಾಧಾನ ಮಾಡಿದಳು. ಇದರಿಂದ ದುಶ್ಶಳೆಗೆ ನೆಮ್ಮದಿಯಾಗಲಿಲ್ಲ. ಕೃಷ್ಣನ ಸಹಾಯವಿರುವ ಅರ್ಜುನನಿಗೆ ಪುತ್ರಶೋಕವನ್ನುಂಟುಮಾಡಿ ಯಾರೂ ಬದುಕಲಾರರೆಂದು ಅವಳಿಗೆ ಗೊತ್ತು. ಅದರಿಂದ ತಾನು ಅಂತಹ ಅದೃಷ್ಟವಂತೆಯಲ್ಲವೆಂದು ತಾಯಿಗೆ ಹೇಳಿಕೊಂಡು ದುಃಖಿಸಿದಳು.

ದುಶ್ಶಳೆಯ ಮಾತು ಧೃತರಾಷ್ಟ್ರನಿಗೆ ಸತ್ಯವಾಗಿ ತೋರಿತು. ಕೃಷ್ಣನ ತೊಡೆಯ ಮೇಲೆ ಬೆಳೆದ, ಬಲರಾಮನ ಪ್ರೀತಿಗೆ ಪಾತ್ರನಾದ, ಅರ್ಜುನನ ಪ್ರೇಮಕ್ಕೆ ಪಾತ್ರನಾದ ಅಭಿಮನ್ಯುವನ್ನು ಕೊಂದು ಯಾರುತಾನೆ ಬದುಕಬಲ್ಲರೆಂಬುದು ಧೃತರಾಷ್ಟ್ರನ ಎಣಿಕೆ. ಅದರಿಂದ ಅವನು "ಅಭಿಮನ್ಯುವಿನ ಆ ಅವಸ್ಥೆಯನ್ನು ನೋಡಿ ಅರ್ಜುನನು ಏನು ಮಾಡಿದನು?" ಎಂದು ಭಟನನ್ನು ಕೇಳಿದನು.

ಭಟನು ಕೃಷ್ಣನೊಡನೆ ಅರ್ಜುನನು ಸಂಶಪ್ತಕರ ಮೇಲೆ ಯುದ್ಧಮಾಡಲು ಹೋದುದರಿಂದ ಅಭಿಮನ್ಯುವು ಬಾಲಸಹಜವಾದ ಕುತೂಹಲದಿಂದ ಯುದ್ಧಕ್ಕೆ ಹೋದನೆಂದು ವಿಜ್ಞಾಪಿಸಿದನು.

ಅರ್ಜುನನು ಹತ್ತಿರದಲ್ಲಿದ್ದರೆ ಅಭಿಮನ್ಯುವನ್ನು ಯಾರುತಾನೆ ಕೊಲ್ಲುತ್ತಿದ್ದರೆಂದು ಹೇಳಿ "ಉಳಿದ ಪಾಂಡವರು ಈಗ ಏನು ಮಾಡುತ್ತಿರುವರು?" ಧೃತರಾಷ್ಟ್ರನು ಕೇಳಿದನು.

"ಅರ್ಜುನನು ಯುದ್ಧಭೂಮಿಯಿಂದ ಬರುವುದನ್ನೇ ಪಾಂಡವರು ಕಾಯುತ್ತಿದ್ದಾರೆ. ಅದರಿಂದ ಅಭಿಮನ್ಯುವಿನ ಶವಕ್ಕೆ ಅಗ್ನಿ ಸಂಸ್ಕಾರವನ್ನೂ ಮಾಡದೆ ಅವರು ಶತ್ರುಗಳನ್ನು ನಿಂದಿಸುತ್ತ ದುಃಖಿಸುತ್ತಿದ್ದಾರೆ" ಭಟನು ಉತ್ತರ ಹೇಳಿದನು. ಧೃತರಾಷ್ಟ್ರನು ಗಾಂಧಾರಿಯೊಡನೆ ಪಾಂಡವರ ಬಳಿಗೆ ಹೋಗಲು ಆಶಿಸಿದನು.

ಆ ಸಮಯಕ್ಕೆ ದುರ್ಯೋಧನನು ದುಶ್ಶಾಸನ ಶಕುನಿಯರೊಡನೆ ಧೃತರಾಷ್ಟ್ರನ

ಕಡೆಯೇ ಬರುತ್ತ "ವತ್ಸ, ದುಶ್ಶಾಸನ, ಅಭಿಮನ್ಯುವಿನ ವಧೆಯಿಂದ ನಮಗೆ ಜಯವಾಯಿತು. ಕೃಷ್ಣನ ಗರ್ವವು ಈಗ ನಾಶವಾಯಿತು. ಇಂದು ನನಗೆ ಅಭ್ಯುದಯವೂ ಕೀರ್ತಿಯೂ ಉಂಟಾದುವು" ಎಂದು ಸಂತೋಷದಿಂದ ಹೇಳಿದನು. ಅಭಿಮನ್ಯುವಿನ ಮರಣದಿಂದ ಪಾಂಡವರಿಗೆ ತೀವ್ರವಾದ ಶೋಕವುಂಟಾಗಿದೆಯೆಂದು ದುಶ್ಶಾಸನನ ಅಭಿಪ್ರಾಯವಾಗಿತ್ತು.

"ಜಯದ್ರಥನಿಗೆ ಇಷ್ಟು ಪರಾಕ್ರಮವಿದೆಯೆಂದು ಯಾರೂ ತಿಳಿದಿರಲಿಲ್ಲ. ಇಂದಿನ ಯುದ್ಧದಲ್ಲಿ ಅವನು ಶೌರ್ಯವನ್ನು ತೋರಿ ಕೀರ್ತಿಯನ್ನು ಗಳಿಸಿದನು" ಶಕುನಿಯು ಹೊಗಳಿದನು.

ಹೀಗೆ ಅವರು ಮಾತನಾಡುತ್ತ ಧೃತರಾಷ್ಟ್ರನನ್ನು ಸಮೀಪಿಸಿದರು. ಹತ್ತಿರದಲ್ಲಿದ್ದ ತಾಯಿತಂದೆಯರಿಗೆ ನಮಸ್ಕರಿಸಿ ಹೋಗೋಣವೆಂದು ದುರ್ಯೋಧನನು ದುಶ್ಶಾಸನ ಶಕುನಿಯರಿಗೆ ಹೇಳಿದನು.

ಆದರೆ ಅದಕ್ಕೆ ಶಕುನಿಯು ಒಪ್ಪಲಿಲ್ಲ. ಪಾಂಡವಪಕ್ಷಪಾತಿಯಾದ ಧೃತರಾಷ್ಟ್ರನಿಗೆ ಕುಲಯುದ್ಧವು ಆಗದುದರಿಂದ ಅವನು ತಮ್ಮನ್ನು ದೂಷಿಸುವನೆಂದೂ ಯುದ್ಧ ಮುಗಿದು ಜಯಗಳಿಸಿದ ಮೇಲೆ ತಾವು ಅವನನ್ನು ಕಾಣುವುದು ಸರಿಯೆಂದೂ ಶಕುನಿಯು ದುರ್ಯೋಧನನಿಗೆ ಸೂಚಿಸಿದನು.

ದುರ್ಯೋಧನನು ಒಪ್ಪದೆ ತಂದೆಯನ್ನು ವಂದಿಸಲು ಧೃತರಾಷ್ಟ್ರನ ಹತ್ತಿರಕ್ಕೆ ಹೋದನು.

ಕ್ರಮವಾಗಿ ದುರ್ಯೋಧನ ದುಶ್ಶಾಸನ ಶಕುನಿಯರು ಧೃತರಾಷ್ಟ್ರನಿಗೆ ತಮ್ಮ ತಮ್ಮ ಹೆಸರನ್ನು ಹೇಳಿಕೊಂಡು ನಮಸ್ಕರಿಸಿದರು.

ಧೃತರಾಷ್ಟ್ರನು ಯಾರಿಗೂ ಆಶೀರ್ವಾದಮಾಡದೆ ಕೋಪದಿಂದ ಸುಮ್ಮನಿದ್ದನು. ಅವರನ್ನು ಆಶೀರ್ವದಿಸದೆ ಮೌನದಿಂದಿರಲು ಕಾರಣವೇನೆಂದು ಅವನನ್ನು ಅವರು ವ್ಯಸನದಿಂದ ಕೇಳಿದರು.

"ಕೃಷ್ಣಾರ್ಜುನರ ಹೃದಯದಂತಿದ್ದ ಬಾಲಕನಾದ ಅಭಿಮನ್ಯುವನ್ನು ಕೊಂದು ಬದುಕುವ ಆಸೆಯನ್ನು ಬಿಟ್ಟ ನಿಮಗೆ ಹೇಗೆ ಆಶೀರ್ವದಿಸಲಿ ?" ಧೃತರಾಷ್ಟ್ರನು ಉತ್ತರ ಹೇಳಿದನು.

ದುರ್ಯೋಧನನು "ಅಪ್ಪಾ, ಅದೇತಕ್ಕೆ ಇಷ್ಟು ಕಳವಳಪಡುವೆ ?" ಎಂದು ಕೇಳಿದನು.

"ಕಳವಳಪೇತಕ್ಕೆನ್ನುವೆಯಾ? ಗಂಡು ಸಂತಾನವೇ ಹೆಚ್ಚಾದ ನನ್ನ ವಂಶದಲ್ಲಿ ಕೊನೆಗೆ ಮಗಳೊಬ್ಬಳು ಹುಟ್ಟಿದಳು. ಈಗ ನಿಮ್ಮೆಲ್ಲರ ಪ್ರಸಾದದಿಂದ ಅವಳು ವೈಧವ್ಯವನ್ನು ಹೊಂದುತ್ತಾಳೆ!" ಧೃತರಾಷ್ಟ್ರನು ದುಃಖದಿಂದ ಹೇಳಿದನು.

ದುರ್ಯೋಧನನು ಕೇಳಿದನು—"ಜಯದ್ರಥನಿಗೂ ಇದಕ್ಕೂ ಯಾವ ಸಂಬಂಧ?"

"ಅತಿ ಬುದ್ಧಿವಂತನಾದ ಅವನೇ ಪಾಂಡವರನ್ನು ತಡೆದನಲ್ಲವೆ?" ಧೃತರಾಷ್ಟ್ರನು ಹೇಳಿದನು.

"ಏನು! ಅವನೊಬ್ಬನೆ ತಡೆದನೆ! ಇಲ್ಲ, ಇನ್ನೂ ಅನೇಕರು ತಡೆದರು" ಎಂದು ದುರ್ಯೋಧನನು ತಿಳಿಸಿದನು.

"ಅಯ್ಯೋ, ಕಷ್ಟ. ನಿರ್ಘೃಣರಾದ ಅನೇಕರು ಸೇರಿಕೊಂಡು ಒಬ್ಬಂಟಿಗನಾದ ಬಾಲಕನನ್ನು ಕೊಂದಾಗ ಅವರ ಭುಜಗಳೇಕೆ ಮುರಿಯಲಿಲ್ಲ?" ಧೃತರಾಷ್ಟ್ರನು ಕೋಪದಿಂದ ನಿಷ್ಠುರನಾಗಿ ನಿಂದಿಸಿದನು.

"ವೃದ್ಧ ಭೀಷ್ಮನನ್ನು ಮೋಸದಿಂದ ಕೊಂದವರ ತೋಳುಗಳೇಕೆ ಬೀಳಲಿಲ್ಲ? ಅಭಿಮನ್ಯು ಬಾಲಕನಾದರೆ ಪರಾಕ್ರಮದಲ್ಲಿಯೂ ಬಾಲಕನೆ? ಆ ವೀರನನ್ನು ಕೊಂದ ಮಾತ್ರಕ್ಕೆ ನಮ್ಮ ತೋಳು ಬಿದ್ದುಹೋಗಬೇಕೇನು?" ದುರ್ಯೋಧನನು ಕೋಪದಿಂದ ತಂದೆಯ ಮಾತನ್ನು ತಿರಸ್ಕರಿಸಿ ಮಾತನಾಡಿದನು.

ಧೃತರಾಷ್ಟ್ರನು ಭೀಷ್ಮನ ಮತ್ತು ಅಭಿಮನ್ಯುವಿನ ವಧೆ ಒಂದಕ್ಕೊಂದು ಸಮನಲ್ಲ ವೆಂದೂ, ಭೀಷ್ಮನು ಸ್ವೇಚ್ಛಾಮರಣಿಯಾದುದರಿಂದ ತಾನೇ ತನ್ನ ಮರಣದ ರಹಸ್ಯವನ್ನು ಪಾಂಡವರಿಗೆ ಹೇಳಿಕೊಟ್ಟನೆಂದೂ, ಆದರೆ ಅಭಿಮನ್ಯುವನ್ನು ಕೊಂದುದು ಸರಿಯಲ್ಲವೆಂದೂ ತಿಳಿಸಿದನು.

ದುಶ್ಶಾಸನನು ಅಭಿಮನ್ಯುವು ಹುಡುಗನಾದರೂ ಪರಾಕ್ರಮದಲ್ಲಿ ಹುಡುಗನಲ್ಲ ವೆಂದೂ ಅವನು ಯುದ್ಧದಲ್ಲಿ ಶೌರ್ಯವನ್ನು ತೋರಿದನೆಂದೂ ಹೇಳಿದನು. ಧೃತರಾಷ್ಟ್ರನು "ಅಯ್ಯೋ! ಕಷ್ಟ. ಪುತ್ರಶೋಕದಿಂದ ಈಗ ಅರ್ಜುನನು ಏನು ಮಾಡುವನೋ!" ಎಂದು ನಿಟ್ಟುಸಿರುಗರೆದನು.

ಅರ್ಜುನನು ಏನು ಮಾಡುತ್ತಾನೆಂದು ದುರ್ಯೋಧನನು ಕೇಳಲು ಧೃತರಾಷ್ಟ್ರನು "ನೀವು ಅಲ್ಲಿಯವರೆಗೆ ಬದುಕಿದ್ದರೆ ಅವನು ಏನು ಮಾಡುವನೆಂಬುದನ್ನು ನೀವೇ ನೋಡುವಿರಿ" ಎಂದನು.

ಧೃತರಾಷ್ಟ್ರನ ಮಾತು ದುರ್ಯೋಧನನಿಗೆ ಸರಿಯೆನಿಸಲಿಲ್ಲ. ಆದ್ದರಿಂದ ಅವನು

"ಅಂಥ ಪರಾಕ್ರಮಿಯಾದ ಅರ್ಜುನನು ಯಾರು ? ಅವನೇನು ಮಾಡುವನು?" ಎಂದು ಕೇಳಿದನು.

ಧೃತರಾಷ್ಟ್ರನು "ಅರ್ಜುನನು ಯಾರೆಂದು ನೀನು ಇಂದ್ರನನ್ನು ಕೇಳು. ಹಿಂದೆ ಕಿರಾತನಾಗಿ ಬಂದು ಅರ್ಜುನನೊಡನೆ ಕಾದಾಡಿದ ಹರನನ್ನು ಕೇಳು. ಖಾಂಡವ ವನವನ್ನು ಸುಟ್ಟು ತೃಪ್ತಿಗೊಂಡ ಅಗ್ನಿಯನ್ನು ಕೇಳು. ಅಂದು ನಿನ್ನನ್ನು ಗೆದ್ದು ಸೆರೆಹಿಡಿದಿದ್ದ ಚಿತ್ರಾಂಗದನನ್ನು ಕೇಳು" ಎಂದು ವ್ಯಂಗ್ಯವಾಗಿ ಉತ್ತರ ಹೇಳಿದನು.

ದುರ್ಯೋಧನನು ಅರ್ಜುನನನ್ನು ಗೆಲ್ಲಬಲ್ಲ ವೀರನಾದ ಕರ್ಣನು ತನ್ನ ಕಡೆಗಿರುವನೆಂದನು. ಇಂದ್ರನಿಗೆ ಕವಚಕುಂಡಲಗಳನ್ನು ಕೊಟ್ಟು ಪರಶುರಾಮನ ಶಾಪಕ್ಕೆ ಗುರಿಯಾದ ಕರ್ಣನು ಅರ್ಜುನನಿಗೆ ಸಮಬಲನಾಗನೆಂದು ಧೃತರಾಷ್ಟ್ರನು ಹೇಳಿದನು. ಶಕುನಿಯು ಧೃತರಾಷ್ಟ್ರನು ತಮ್ಮನ್ನು ಮಾತ್ರ ನಿಂದಿಸುವನೆಂದು ಆಕ್ಷೇಪಿಸಲು, ಧೃತರಾಷ್ಟ್ರನು "ಯಾವಾಗಲೂ ಜೂಜಾಡುವ ನಿನ್ನಿಂದ ನಮ್ಮ ವಂಶದಲ್ಲಿ ವೈರಾಗ್ನಿ ಹುಟ್ಟಿತು. ನೀನಿಟ್ಟ ಆ ಬೆಂಕಿ ನಮ್ಮ ಕುಲದ ಮಕ್ಕಳನ್ನು ಈಗ ಸುಟ್ಟಿತು" ಎಂದು ದೂಷಿಸಿದನು.

ಅಷ್ಟರಲ್ಲಿ ನೆಲ ಗುಡುಗಿತು. ಉಲ್ಕಾಪಾತವಾದಂತೆ ಆಕಾಶ ಬೆಳಗಿತು. ಧೃತರಾಷ್ಟ್ರನು, ಮೊಮ್ಮಗನ ಮರಣದಿಂದ ಇಂದ್ರನು ಸುರಿಸಿದ ಕಣ್ಣೀರು ಉಲ್ಕೆಯ ರೂಪದಲ್ಲಿ ಬೀಳುತ್ತಿರುವುದೆಂದು ; ಥಟ್ಟನೆ ಹಾಗಾದುದಕ್ಕೆ ಕಾರಣ ಹೇಳಿದನು.

ಅದೇ ವೇಳೆಗೆ ಪಾಂಡವರ ಶಿಬಿರದಲ್ಲಿ ಮಹಾ ಕೋಲಾಹಲವೆದ್ದಿತು. ಅದೇನೆಂದು ತಿಳಿಯಲು ಭಟನು ಅಲ್ಲಿಗೆ ಹೋಗಿ ಬಂದು "ಯುದ್ಧದಿಂದ ಹಿಂದಿರುಗಿದ ಅರ್ಜುನನು ಮಗನ ಶವವನ್ನು ತೊಡೆಯ ಮೇಲಿಟ್ಟುಕೊಂಡು ಕೋಪದಿಂದ 'ಯಾರು ನನ್ನ ಮಗನನ್ನು ಕೊಂದರೋ ಅವರನ್ನು ನಾಳೆ ಹೊತ್ತು ಮುಳುಗುವಷ್ಟರಲ್ಲಿ ಕೊಲ್ಲುತ್ತೇನೆ' ಎಂದು ಪ್ರತಿಜ್ಞೆ ಮಾಡಿದನು" ಎಂದು ತಿಳಿಸಿದನು.

ಧೃತರಾಷ್ಟ್ರನು "ಅರ್ಜುನನು ಪ್ರತಿಜ್ಞೆ ಮಾಡಿದ ಮಾತ್ರಕ್ಕೇ ಭೂಮಿ ನಡುಗಿದ ಮೇಲೆ ಅವನು ಯುದ್ಧಕ್ಕೆ ನಿಂತಮೇಲೆ ಮೂರು ಲೋಕವೂ ನಡುಗುವುದು" ಎಂದು ಉದ್ಗರಿಸಿದನು.

ದುರ್ಯೋಧನನು ತನ್ನ ಸೈನ್ಯವನ್ನೆಲ್ಲಾ ಸೇರಿಸಿ ದ್ರೋಣರ ಉಪದೇಶದಂತೆ ಅಭೇದ್ಯವಾದ ವ್ಯೂಹವನ್ನು ರಚಿಸಿ ಅದರ ಮಧ್ಯದಲ್ಲಿ ಜಯದ್ರಥನನ್ನು ಇರಿಸಿ ಅರ್ಜುನನ ಪ್ರತಿಜ್ಞೆಯು ಭಂಗವಾಗುವಂತೆ ಮಾಡುವೆನೆಂದು ಹೇಳಿದನು.

ಜಯದ್ರಥನು ಭೂವ್ಯಾಕಾಶಗಳಲ್ಲಿ ಎಲ್ಲೇ ಅಡಗಿದರೂ ಅರ್ಜುನನ ಬಾಣಗಳು ಅವನನ್ನು ಬೆನ್ನಟ್ಟುತ್ತವೆಯೆಂದು ಧೃತರಾಷ್ಟ್ರನು ಮಗನಿಗೆ ತಿಳಿಸಿದನು. ಹೇಗಾದರೂ ಜಯದ್ರಥನನ್ನು ಉಳಿಸಿಕೊಳ್ಳುವುದು ಅಸಾಧ್ಯವೆಂದೂ ಅಲ್ಲದೆ ಕೃಷ್ಣನು ಸಹಾಯಕನಾಗಿರುವತನಕ ಅರ್ಜುನನನ್ನು ಗೆಲ್ಲುವುದು ಯಾರಿಂದಲೂ ಸಾಧ್ಯವಾಗದೆಂದೂ ಅವನಿಗೆ ತಿಳಿದಿತ್ತು.

ಸಂಜೆಯ ಹೊತ್ತಿಗೆ ಯುದ್ಧದಿಂದ ಶಿಬಿರಕ್ಕೆ ಮರಳಿದ ಅರ್ಜುನನು ಅಭಿಮನ್ಯುವಿನ ಕಳೇಬರವನ್ನು ನೋಡಿ ರೋಷದಿಂದ ಮಗನ ಸಾವಿಗೆ ಕಾರಣನಾದವನನ್ನು ಮರುದಿನದ ಸೂರ್ಯಾಸ್ತದೊಳಗಾಗಿ ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿದನು.

ಆ ಪ್ರತಿಜ್ಞೆಯನ್ನು ದುರ್ಯೋಧನನಿಗೆ ಕೃಷ್ಣನ ಆಜ್ಞೆಯಂತೆ ತಿಳಿಸಲು ಘಟೋತ್ಕಚನು ದೂತನಾಗಿ ದುರ್ಯೋಧನ ಶಕುನಿಯರೊಡನೆ ಮಾತಾಡುತ್ತಿದ್ದ ಧೃತರಾಷ್ಟ್ರನ ಶಿಬಿರದ ಹೆಬ್ಬಾಗಿಲಿಗೆ ಬಂದನು. ಹಿಡಿಂಬೆಯ ಮಗನಾದ ತಾನು ಕೃಷ್ಣನ ಸಂದೇಶವನ್ನು ಗುರುಸ್ವರೂಪನಾದರೂ ಶತ್ರುವಾದ ದುರ್ಯೋಧನನಿಗೆ ತಿಳಿಸಲು ಬಂದಿರುವುದಾಗಿ ಅವನು ಕೂಗಿ ಹೇಳಿದನು.

ತಾನೇ ದುರ್ಯೋಧನನೆಂದೂ ಕೃಷ್ಣನ ಸಂದೇಶವನ್ನು ಕೇಳಲು ಕುತೂಹಲದಿಂದಿರುವೆನೆಂದೂ ಹೇಳಿ ದುರ್ಯೋಧನನು ಘಟೋತ್ಕಚನನ್ನು ಒಳಕ್ಕೆ ಕರೆದನು.

ಘಟೋತ್ಕಚನು ಒಳಕ್ಕೆ ಹೋಗಿ ಧೃತರಾಷ್ಟ್ರನನ್ನು ನೋಡಿ "ಅಹಾ! ಇವನ ಆಕಾರವು ಎಷ್ಟು ಲಲಿತವಾಗಿ ಗಂಭೀರವಾಗಿದೆ! ಮುದುಕನಾದರೂ ಮೈ ಸುಕ್ಕಿಲ್ಲ. ನೂರು ಮಕ್ಕಳನ್ನು ಪಡೆದರೂ ಇವನ ರೂಪು ಮಾಸಿಲ್ಲ. ಈತನಿದ್ದರೆ ತಮ್ಮ ಸ್ವರ್ಗವು ಎಲ್ಲಿ ಸೂರೆಯಾಗುವುದೋ ಎಂದು ಹೆದರಿ ದೇವತೆಗಳು ಇವನನ್ನು ಕುರುಡನನ್ನಾಗಿ ಮಾಡಿರಬೇಕು!" ಆಶ್ಚರ್ಯದಿಂದ ಉದ್ಗರಿಸಿದನು.

ಬಳಿಕ ಹತ್ತಿರಕ್ಕೆ ಅವನು ಹೋಗಿ "ಅಜ್ಜ, ನಮಸ್ಕರಿಸುತ್ತೇನೆ. ನಾನು ಘಟೋತ್ಕ...." ಎಂದು ಅರ್ಧಕ್ಕೇ ನಿಲ್ಲಿಸಿ "ಅಲ್ಲ, ಅಲ್ಲ. ನನ್ನ ಗುರುಗಳಾದ ಯುಧಿಷ್ಠಿರನೇ ಮೊದಲಾದವರು ನಿನಗೆ ನಮಸ್ಕರಿಸುತ್ತಾರೆ. ಆಮೇಲೆ ನಾನು ಘಟೋತ್ಕಚ ನಮಸ್ಕರಿಸುತ್ತೇನೆ" ಎಂದನು.

ಧೃತರಾಷ್ಟ್ರನು "ಬಾ, ಮಗೂ, ಬಾ" ಎಂದು ಆದರದಿಂದ ಕರೆದು, "ಸೋದರನ ಮರಣದಿಂದ ನಿನಗೆಷ್ಟು ದುಃಖವಾಗಿದೆಯೊ ಅಷ್ಟೇ ದುಃಖವು ನನಗೂ ಉಂಟಾಗಿದೆ. ನನ್ನ ಮಕ್ಕಳ ಅಪರಾಧದಿಂದ ನನಗೆ ಈ ಸಂಕಟವುಂಟಾಯಿತು" ಎಂದು ಶೋಕಾತಿರೇಕದಿಂದ ಹೇಳಿದನು.

ಘಟೋತ್ಕಚನು "ಭಗವಂತನಾದ ಚಕ್ರಾಯುಧನು ಪಿತಾಮಹನಾದ ನಿನಗೆ ಹೀಗೆ ಹೇಳಿದ್ದಾನೆ" ಎಂದು ಹೇಳಲುಪಕ್ರಮಿಸಿದಾಗ ಧೃತರಾಷ್ಟ್ರನು ಭಕ್ತಿ ಪೂರ್ವಕವಾಗಿ ಎದ್ದು ನಿಂತು "ಭಗವಂತನಾದ ಚಕ್ರಾಯುಧನು ಏನೆಂದು ಆಜ್ಞಾಪಿಸಿರುವನು ?" ಎಂದು ಕೇಳಿದನು.

ಕೃಷ್ಣನ ಮಾತನ್ನು ಕುಳಿತುಕೊಂಡೇ ಕೇಳಬೇಕೆಂದು ಘಟೋತ್ಕಚನು ಕೋರಿದುದರಿಂದ ಧೃತರಾಷ್ಟ್ರನು ಕುಳಿತುಕೊಂಡನು.

ಘಟೋತ್ಕಚನು "ತಾತ, ಇದ್ದ ಒಬ್ಬ ಮಗನನ್ನು ಕಳೆದುಕೊಂಡ ಅರ್ಜುನನ ಅವಸ್ಥೆಯೇ ಹೀಗಾದಮೇಲೆ ಇನ್ನು ನಿನ್ನ ಅವಸ್ಥೆ ಏನಾಗುವುದೋ ! ಪುತ್ರ ಶೋಕದಿಂದ ಹುಟ್ಟಿದ ಬೆಂಕಿ ನಿನ್ನ ಪ್ರಾಣವೆಂಬ ಹವಿಸ್ಸನ್ನು ಸುಡುವ ಮೊದಲೇ ನಿನ್ನ ಸೈನ್ಯವನ್ನೆಲ್ಲ ಸೇರಿಸಿಕೊ ಎಂದು ತಿಳಿಸಬೇಕೆಂದು ಚಕ್ರಾಯುಧನು ನನಗೆ ಅಪ್ಪಣೆ ಮಾಡಿರುವನು" ಎಂದು ಹೇಳಿದನು.

"ಕೃಷ್ಣನು ಕೋಪದಿಂದ ಹೀಗೆ ಹೇಳಿದ್ದಾನೆ. ಇನ್ನು ಅರ್ಜುನನು ಕ್ಷತ್ರಿಯರನ್ನೆಲ್ಲಾ ಕೊಲ್ಲುವುದೇ ನಿಶ್ಚಯ" ಧೃತರಾಷ್ಟ್ರನು ಬಿಸುಸುಯ್ದನು.

ಆ ಮಾತನ್ನು ಕೇಳಿ ತನಗೆ ನಗು ಬರುವುದೆಂದು, ದುರ್ಯೋಧನನು ನಕ್ಕು "ಅರ್ಜುನನೊಬ್ಬನೇ ಕ್ಷತ್ರಿಯರನ್ನೆಲ್ಲಾ ಎಲ್ಲಿ ಕೊಂದುಬಿಡುವನೋ ಎಂದು ಈಗ ಕೃಷ್ಣನು ಅಸೂಯೆಪಟ್ಟು ದೇವತೆಗಳೊಡನೆ ಆಲೋಚಿಸುತ್ತಿರಬಹುದು" ಎಂದು ಅಣಕವಾಡಿದನು.

ತಾನು ಕೃಷ್ಣನ ಆಣತಿಯಂತೆ ಅರ್ಜುನನ ಪ್ರತಿಜ್ಞೆಯನ್ನು ತಿಳಿಸಿರುವೆನೆಂದೂ ಮತ್ತು ಕೃಷ್ಣನ ಸಂದೇಶವನ್ನು ದುರ್ಯೋಧನನೂ ಕೇಳಬೇಕೆಂದು ಘಟೋತ್ಕಚನು ತಿಳಿಸಲು, ದುಶ್ಶಾಸನನು ಕೋಪದಿಂದ ಮೇಲೆದ್ದು "ಯಾರ ಆಜ್ಞೆಯನ್ನು ಈ ಧರೆಯ ರಾಜರೆಲ್ಲ ನಡೆಸುವರೊ ಅಂಥವನಿಗೆ ರಾಜನಲ್ಲದ ಯಾರೋ ಒಬ್ಬನು ಸಂದೇಶವನ್ನು ಕಳಿಸಿರುವನಂತೆ !" ಎಂದನು.

"ಏನು ! ಹಾಗಾದರೆ ನಿಮಗೆ ಕೃಷ್ಣನು ರಾಜನಲ್ಲವೋ ! ಜರಾಸಂಧನ ಸೆರೆಯಲ್ಲಿದ್ದ ರಾಜರನ್ನೆಲ್ಲ ಬಿಡಿಸಿದ, ರಾಜಸೂಯಯಾಗದಲ್ಲಿ ಭೀಷ್ಮನಿಂದ ಅರ್ಘ್ಯವನ್ನು ಸ್ವೀಕರಿಸಿದ, ಲಕ್ಷ್ಮಿಯನ್ನು ಪಡೆದ ಚಕ್ರಾಯುಧನು ನಿಮಗೆ ರಾಜನಲ್ಲವೆ!" ಕುಪಿತನಾಗಿ ಘಟೋತ್ಕಚನು ಧಿಕ್ಕರಿಸಿ ನುಡಿದನು.

ವಾದದಿಂದ ಪ್ರಯೋಜನವಿಲ್ಲವೆಂದು ದುರ್ಯೋಧನನು ದುಶ್ಶಾಸನನನ್ನು ಸಮಾಧಾನ

ನಡಿಸಿ "ನಿಮ್ಮ ಪ್ರಭುವು ಏನು ಹೇಳಿದ್ದಾನೆ" ಎಂದು ಘಟೋತ್ಕಚನನ್ನು ಕೇಳಿದನು.

"ಕ್ಷತ್ರಿಯರ ನಾಶವು ಸನ್ನಿಹಿತವಾಯಿತು. ಇನ್ನು ನೂರಾರು ರಾಜರು ಮಡಿದು ಭೂಭಾರವು ಇಳಿಯುವುದು. ಮಗನ ಸಾವಿನಿಂದ ರೋಷಗೊಂಡ ಅರ್ಜುನನನ್ನು ಗೆಲ್ಲುವವನು ಯಾರೂ ಇಲ್ಲ." ಹೀಗೆ ಕೃಷ್ಣನು ತಿಳಿಸಿರುವನೆಂದು ಘಟೋತ್ಕಚನು ದುರ್ಯೋಧನನಿಗೆ ಹೇಳಿದನು.

ಶಕುನಿಯು ಸುಮ್ಮನಿರದೆ ನಡುವೆ ಬಾಯಿಹಾಕಿ "ಬರಿಯ ಮಾತಿನಿಂದಲೇ ಧರೆಯನ್ನು ಗೆಲ್ಲುವುದಾದರೆ! ಪ್ರತಿ ಮಾತಿಗೂ ಕ್ಷತ್ರಿಯರ ಸಂಹಾರವಾದರೆ! ಅದು ಸಾಧ್ಯವಾಗುವುದು" ಎಂದು ವ್ಯಂಗ್ಯವಾಗಿ ನಕ್ಕು ನುಡಿದನು.

ಘಟೋತ್ಕಚನು ಕುಪಿತನಾಗಿ "ಎಲಾ ಶಕುನಿ, ನಿನ್ನ ದಾಳಗಳನ್ನು ಬಿಸಾಡಿ ಯುದ್ಧಕ್ಕೆ ಬೇಕಾದ ಬಿಲ್ಲುಬಾಣಗಳನ್ನು ಹಿಡಿದುಕೊ. ಇದು ಸ್ತ್ರೀಹರಣವಲ್ಲ ಅಥವಾ ರಾಜತಂತ್ರವಲ್ಲ. ಈ ಯುದ್ಧದಾಟದಲ್ಲಿ ಪ್ರಾಣಗಳೇ ಪಣ" ಎಂದು ಮೂದಲಿಸಿದನು.

ದುಶ್ಶಾಸನನು ಕೆರಳಿ "ನೀನು ಹದ್ದುಮೀರಿ ಮಾತಾಡುತ್ತಿದ್ದೀಯೆ. ನಿನ್ನ ತಾಯಿಯ ರಾಕ್ಷಸ ಸ್ವಭಾವಕ್ಕೆ ನಿನ್ನ ದರ್ಪ ಅನುಗುಣವಾಗಿದೆ. ನಾವೂ ನಿನ್ನಂತೆ ರೌಪ್ರರು. ನಾವೂ ರಾಕ್ಷಸರಿಗೆ ಸಮವಾದ ಉಗ್ರಸ್ವಭಾವದವರು" ಎಂದು ಗರ್ಜಿಸಿದನು.

ಘಟೋತ್ಕಚನು ಖಿನ್ನನಾಗಿ "ಶಾಂತಂ, ಶಾಂತಂ ಪಾಪಂ. ನೀವು ರಾಕ್ಷಸರಿಗಿಂತಲೂ ಕ್ರೂರಿಗಳು. ಏಕೆಂದರೆ, ರಾಕ್ಷಸರು ಅರಗಿನ ಮನೆಯಲ್ಲಿ ಮಲಗಿರುವ ಅಣ್ಣ ತಮ್ಮಂದಿರನ್ನು ಸುಡುವುದಿಲ್ಲ; ಅತ್ತಿಗೆಯನ್ನು ಮುಂದಲೆ ಹಿಡಿದು ಎಳೆಯುವುದಿಲ್ಲ; ಯುದ್ಧದಲ್ಲಿ ಮಕ್ಕಳನ್ನು ಕೊಂದು ಅದೊಂದು ಸಾಹಸವೆಂದು ಹೇಳಿಕೊಳ್ಳುವುದಿಲ್ಲ. ಆದರೆ ರಾಕ್ಷಸರು ಕುರೂಪಿಗಳಾದರೂ ಉಗ್ರರಾದರೂ ದಯೆಯುಳ್ಳವರು." ಮಾರ್ಮಿಕವಾಗಿ ಮೊನೆಮಾತಿನಿಂದ ಅವರನ್ನು ಇರಿದನು.

ಘಟೋತ್ಕಚನ ಆ ಮಾತುಗಳನ್ನು ಕೇಳಿ ದುರ್ಯೋಧನನು ಕೋಪಿಸಿಕೊಂಡು "ನೀನು ದೂತನಾಗಿ ಬಂದಿದ್ದೀಯೆ. ಯುದ್ಧಕ್ಕಲ್ಲ ಬಂದಿರುವುದು. ಸಂದೇಶವನ್ನು ತೆಗೆದುಕೊಂಡು ಮರಳು. ನಾವು ದೂತರನ್ನು ಕೊಲ್ಲುವವರಲ್ಲ" ಎಂದನು. ಘಟೋತ್ಕಚನಿಗೂ ಕೋಪ ಬಂತು. "ನನ್ನನ್ನು ದೂತನೆಂದು ಹೆದರಿಸುತ್ತೀ

ಪೇನು? ನಾನು ದೂತನಲ್ಲ. ಇದೋ ನಿಂತಿದ್ದೇನೆ. ನೀವೆಲ್ಲರೂ ಸೇರಿಕೊಂಡು ನನ್ನನ್ನು ಹೊಡೆಯಿರಿ. ನಾನೇನು ಬಿಲ್ಲಿನ ಹೆದೆ ಕತ್ತರಿಸಿ ಹೋದುದರಿಂದ ಅಶಕ್ತನಾದ ಅಭಿಮನ್ಯುವಲ್ಲ. ನನಗೂ ಬಾಲ್ಯದಿಂದ ಆಸೆಯಿದ್ದಿತು. ಯಮಲೋಕಕ್ಕೆ ಹೋಗಬೇಕೆಂದು ಆಸೆಯಿರುವ ಗಂಡಸರು ಎದ್ದು ಬಂದು ನನ್ನೊಡನೆ ಯುದ್ಧಮಾಡಿ." ಅವನು ಹಲ್ಲುಮುಡಿಯನ್ನು ಕಚ್ಚಿ ಮುಷ್ಟಿಯನ್ನು ಬಿಗಿಹಿಡಿದು ಭಯಂಕರವಾಗಿ ಆರ್ಭಟಿಸಿದನು.

ಧೃತರಾಷ್ಟ್ರನು ಘಟೋತ್ಕಚನನ್ನು ಒಳ್ಳೆಯ ಮಾತಿನಿಂದ ಸಮಾಧಾನಪಡಿಸಿದನು. ಧೃತರಾಷ್ಟ್ರನನ್ನು ಕುರಿತು "ಪೂಜ್ಯನಾದ ನಾರಾಯಣನಿಗೆ ಏನೆಂದು ಬಿನ್ನವಿಸಲಿ?" ಘಟೋತ್ಕಚನು ಪ್ರಶ್ನಿಸಿದನು.

ದುರ್ಯೋಧನನು "ನಿನ್ನ ಪೌರುಷಕ್ಕೆ ನಾವು ಹೆದರುವುದಿಲ್ಲ. ಬಹಳ ಮಾತಿನಿಂದ ಪ್ರಯೋಜನವೇನು! ಯುದ್ಧದಲ್ಲಿಯೇ ಅದು ತಿಳಿಯುತ್ತದೆ. ನೂರಾರು ರಾಜರೊಡನೆ ಶ್ವೇತಛತ್ರಗಳ ಮಧ್ಯದಲ್ಲಿ ನಾನು ಬರುತ್ತೇನೆ. ಪಾಂಡವರೊಡನೆ ಬರಲಿ. ಆಗ ನಾನು ನಿನಗೆ ಉತ್ತರವನ್ನು ಬಾಣಗಳಿಂದ ಕೊಡುತ್ತೇನೆ" ಎಂದು ಕೃಷ್ಣನಿಗೆ ತನ್ನ ಮಾತುಗಳಿಂದಲೇ ತಿಳಿಸಬೇಕೆಂದು ಘಟೋತ್ಕಚನಿಗೆ ಹೇಳಿ ಕಳುಹಿಸಿದನು.

ಘಟೋತ್ಕಚನ ದೌತ್ಯವು ಮುಗಿಯಿತು. ಧೃತರಾಷ್ಟ್ರನ ಅಪ್ಪಣೆಯನ್ನು ಪಡೆದು ಹೊರಡುವ ಮುನ್ನ "ನಿಮಗೆ ಏನೇನು ಆಸೆಯಿದೆಯೊ ಅದನ್ನೆಲ್ಲಾ ತೀರಿಸಿಕೊಳ್ಳಿ. ನಾಳೆಯ ದಿನ ಸೂರ್ಯೋದಯದೊಡನೆ ಪಾಂಡವನ ರೂಪವನ್ನು ಧರಿಸಿ ನಿಮ್ಮ ಭಾಗದ ಯಮ ಬರುತ್ತಾನೆ" ಎಂದು ಜನಾರ್ದನನ ಕಡೆಯ ಸಂದೇಶವನ್ನು ಅವರೆಲ್ಲರಿಗೂ ಸಾರಿ ಹೇಳಿದನು. ಅನಂತರ ಅವನು ಅಲ್ಲಿಂದ ಹೊರಟು ಕೃಷ್ಣನನ್ನು ಕಾಣಲು ಪಾಂಡವರ ಶಿಬಿರಕ್ಕೆ ಹೋದನು.



# ಕರ್ಣಭಾರ

ಮಹಾಭಾರತ ಯುದ್ಧವು ಪ್ರಾರಂಭವಾದಾಗಿನಿಂದ ಕೌರವರಿಗೆ ಅಪಜಯ ತಪ್ಪ ಲಿಲ್ಲ. ತನ್ನ ಗುರುವಾದ ಪರಶುರಾಮನನ್ನೇ ಯುದ್ಧದಲ್ಲಿ ಸೋಲಿಸಿದ್ದ ಮಹಾ ಪರಾಕ್ರಮಿಯಾದ ಭೀಷ್ಮನು ಹತ್ತು ದಿನಗಳವರೆಗೆ ಘೋರವಾಗಿ ಕಾದಾಡಿ ಕೊನೆಗೆ ಶಸ್ತ್ರಸನ್ಯಾಸ ಮಾಡಿದನು.

ಕಾರ್ಮುಕಾಚಾರ್ಯನಾದ ದ್ರೋಣನು ಅನುಪಮ ಶೌರ್ಯದಿಂದ ಹೋರಾಡಿ ವೀರ ಸ್ವರ್ಗವನ್ನು ಸೇರಿದನು. ಭೀಷ್ಮದ್ರೋಣರು ಮಾಡದ ಹರ್ಷವನ್ನು ತನ್ನ ಆಪ್ತ ಮಿತ್ರನು ಮಾಡುವನೆಂಬ ಅಪಾರ ನಂಬಿಕೆಯಿಂದ ದುರ್ಯೋಧನನು ಕರ್ಣನಿಗೆ ಸೇನಾಪತಿಯ ಪಟ್ಟವನ್ನು ಕಟ್ಟಿದನು.

ಕರ್ಣನು ಜಯವನಿತೆಯನ್ನು ಗೆದ್ದು ತರುವ ಮಹೋತ್ಸಾಹದಿಂದ ಮದ್ರದೇಶಾಧಿ ಪತಿಯಾದ ಶಲ್ಯನೇ ತನಗೆ ಸಾರಥಿಯಾಗಬೇಕೆಂದು ದುರ್ಯೋಧನನನ್ನು ಕೇಳಿ ಕೊಂಡನು. ಶಲ್ಯರಾಜನು ತಾನು ಸೂತನಿಗೆ ತೇರೆಸಗಲೊಲ್ಲೆನೆಂದು ಹೇಳಿ ದರೂ ದುರ್ಯೋಧನನ ಪ್ರಾರ್ಥನೆಯನ್ನು ತಿರಸ್ಕರಿಸಲಾರದೆ ಕರ್ಣನ ಸಾರಥಿ ಯಾದನು.

ಅಶ್ವಹೃದಯಜ್ಞನಾದ ಶಲ್ಯನೇ ಸಾರಥ್ಯ ವಹಿಸಿದ ಮೇಲೆ ಕೇಳಬೇಕೆ! ಕರ್ಣನ ಯುದ್ಧೋತ್ಸಾಹವು ಇಮ್ಮಡಿಯಾಯಿತು. ತಾನು ಸೇನಾಧಿಪತಿಯಾದ ಮೊದಲ ನೆಯ ದಿನದ ಯುದ್ಧದಲ್ಲಿ ಅವನು ಅಪೂರ್ವ ಪರಾಕ್ರಮದಿಂದ ಹೋರಾಡಿ ಶತ್ರು ಸೈನ್ಯಸಾಗರವನ್ನು ಕದಡಿಬಿಟ್ಟನು. ಅವನೊಡನೆ ಯುದ್ಧ ಮಾಡಿದ ಯಾವ ಕ್ಷತ್ರಿಯನೂ ಜೀವಂತನಾಗಿ ಹಿಂತಿರುಗಲಿಲ್ಲ.

ಮರುದಿನದ ಪ್ರಾತಃಕಾಲ ರಣಕಹಳೆ ಊದಿತು. ಲೋಕವೀರನೆನಿಸಿದ ದುರ್ಯೋಧನನು ಯುದ್ಧಭೂಮಿಗೆ ಸಿದ್ಧನಾಗಿ ಹೊರಟು ಕರ್ಣನಿಗೆ ಹೇಳಕಳಿ ಸಿದನು. ಕರ್ಣನು ಶೌರ್ಯದುಬ್ಬಿನಿಂದ ಕಂಗೊಳಿಸುತ್ತ ಶಲ್ಯರಾಜನೊಡನೆ ರಥವನ್ನು ಹತ್ತಿ ಹೊರಟನು. ಅವನ ಮುಖದಲ್ಲಿ ಹಿಂದೆಂದೂ ಕಾಣದಿದ್ದಂತಹ ಪರಿತಾಪವೊಂದು ಕಾಣಬರುತ್ತಿತ್ತು. ತನ್ನ ಮಿತ್ರನೂ ಒಡೆಯನೂ ಆದ ದುರ್ಯೋಧನನಿಗೆ ಜಯವನ್ನು ಸಾಧಿಸುವ ಹಂಬಲದಿಂದ ಅರ್ಜುನನೆಲ್ಲಿರುವನೋ ಅಲ್ಲಿಗೇ ರಥವನ್ನು ನಡೆಸಲು ಶಲ್ಯರಾಜನಿಗೆ ಅವನು ಹೇಳಿದನು. ಶಲ್ಯನು ರಥ ವನ್ನು ವೇಗವಾಗಿ ಓಡಿಸಿದನು.

ರಥವು ರಣಭೂಮಿಯನ್ನು ಸಮೀಪಿಸಿದಂತೆ ಕರ್ಣನ ಮನವು ಅಳುಕತೊಡಗಿತು.

ಅನಿರ್ವಚನೀಯವಾದ ಶೋಕವೊಂದು ಅವನ ಹೃದಯದಲ್ಲಿ ತಲೆದೋರಿತು. ಅವನ ಪೂರ್ವ ವೃತ್ತಾಂತವು ಅವನ ಚಿತ್ತದಲ್ಲಿ ಸುಳಿದು ಎದೆಯು ಭಾರವಾಯಿತು. ಅದನ್ನು ಹಗುರಮಾಡಿಕೊಳ್ಳಲು ಶಲ್ಯನಿಗೆ ಅವನು ಹೇಳತೊಡಗಿದನು :

"ಆಹಾ ! ಭಯಂಕರವಾದ ಯುದ್ಧಭೂಮಿಯಲ್ಲಿ ಕೋಪಿಸಿಕೊಂಡ ಯಮನಂತೆ ನಿಂತ ನನಗೂ ಈಗ ಯುದ್ಧಕಾಲದಲ್ಲಿ ಮನಸ್ಸು ಅಳುಕುತ್ತಿದೆ. ಕುಂತೀದೇವಿಯಲ್ಲಿ ನಾನು ಮೊದಲು ಹುಟ್ಟಿದೆ. ರಾಧೇಯನೆಂದು ನನಗೆ ಹೆಸರಾಯಿತು. ಪಾಂಡವರು ನನಗೆ ತಮ್ಮಂದಿರಾದರು. ಅಯ್ಯೋ ! ಕಷ್ಟ. ಅಸ್ತ್ರವಿದ್ಯೆಯನ್ನು ಕಲಿತರೂ ಅದೀಗ ನಿಷ್ಫಲವಾಯಿತು. ತಾಯಿಗೆ ಕೊಟ್ಟ ಮಾತು ನನ್ನನ್ನೀಗ ತಡೆಯುತ್ತಿದೆ" ಎಂದು ಕರ್ಣನು ವಿಷಾದದಿಂದ ಹೇಳಿದನು. ತರುವಾಯ ಅವನಿಗೆ ಅಸ್ತ್ರವೃತ್ತಾಂತವು ಸ್ಮರಣೆಗೆ ಬಂದಿತು. ಅದನ್ನು ಕೇಳಲು ತನಗೂ ಕುತೂಹಲವಾಗಿದೆಯೆಂದು ಶಲ್ಯನು ಅವನಿಗೆ ಹೇಳಲು ಪ್ರೋತ್ಸಾಹಿಸಿದನು.

ಕರ್ಣನು ಹೇಳಿದನು : "ಕ್ಷತ್ರಿಯಾಂತಕನೂ ಭೃಗುಕುಲಪತಿಯೂ ಆದ ಪರಶುರಾಮ ಮುನಿಯ ಬಳಿಗೆ ನಾನು ಹೋಗಿ ಏಕಾಂತ ಸಮಯದಲ್ಲಿ ಅವನ ಕಾಲಿಗೆರಗಿ ನಿಂತುಕೊಂಡೆ. ಅವನು ನನ್ನನ್ನು ಆಶೀರ್ವದಿಸಿ 'ನೀನು ಯಾರು ? ಇಲ್ಲಿಗೇಕೆ ಬಂದೆ ?' ಎಂದು ಕೇಳಿದನು. ನಾನು 'ಪೂಜ್ಯರೆ, ತಮ್ಮ ಬಳಿಯಲ್ಲಿ ಸಮಸ್ತ ಅಸ್ತ್ರಗಳನ್ನೂ ಅಭ್ಯಾಸಮಾಡಿ ಕಲಿಯಲು ಇಚ್ಛಿಸುತ್ತೇನೆ' ಎಂದೆ. ಅದಕ್ಕೆ ಮುನಿಯು 'ನಾನು ಬ್ರಾಹ್ಮಣರಿಗೆ ಉಪದೇಶ ಮಾಡುತ್ತೇನೆ. ಕ್ಷತ್ರಿಯರಿಗೆ ಮಾಡುವುದಿಲ್ಲ' ಎಂದನು. ಆಮೇಲೆ ನಾನು ಕ್ಷತ್ರಿಯನಲ್ಲವೆಂದು ಹೇಳಿ. ಅವನ ಶಿಷ್ಯನಾಗಿ ನಿಂತೆ" ಎಂದು ಕರ್ಣನು ನಿಲ್ಲಿಸಿದನು.

ಗತಕಾಲದ ಸ್ಮೃತಿಯು ಅವನ ಹೊಟ್ಟೆಯನ್ನು ಕಿವುಚುತ್ತಿತ್ತು. ಶಲ್ಯನು ಕುತೂಹಲದಿಂದ ಮುಂದೇನಾಯಿತು ಎಂದನು. ಅವನಿಗೂ ಅಸಹಾಯಶೂರನಾದ ಕರ್ಣನ ಶಾಪವೃತ್ತಾಂತವನ್ನು ಕೇಳುವ ಬಯಕೆಯಾಗಿತ್ತು.

"ಕೆಲವು ಕಾಲವಾದ ಮೇಲೆ ಗುರುಗಳೊಮ್ಮೆ ಕಂದಮೂಲ, ಫಲ ಪುಷ್ಪಗಳನ್ನು ತರಬೇಕೆಂದು ಕಾಡಿಗೆ ಹೊರಡಲು ಅವರನ್ನು ನಾನೂ ಹಿಂಬಾಲಿಸಿದೆ. ಆಮೇಲೆ ಕಾಡಿನಲ್ಲಿ ಅಲೆದು ಬಳಲಿಕೆಯಿಂದ ಗುರುಗಳು ನನ್ನ ತೊಡೆಯ ಮೇಲೆ ತಲೆಯಿಟ್ಟು ಮಲಗಿಕೊಂಡರು. ಅನಂತರ ವಜ್ರಮುಖವೆಂಬ ಕ್ರಿಮಿಯು ಬಂದು ನನ್ನ ತೊಡೆಯನ್ನು ಕೊರೆಯಲಾರಂಭಿಸಿತು. ಗುರುಗಳಿಗೆ ನಿದ್ರಾಭಂಗವಾದೀತೆಂದು

ಭಯದಿಂದ ನೆತ್ತರು ಹರಿಯುತ್ತಿದ್ದರೂ ನನಗಾದ ನೋವನ್ನು ಸಹಿಸಿಕೊಂಡು ಸುಮ್ಮನಿದ್ದೆ. ರಕ್ತದಲ್ಲಿ ಗುರುವಿನ ಮೈ ನೆನೆಯಿತು. ತಟ್ಟನೆ ಅವರು ಎಚ್ಚತ್ತು ನಾನಾರೆಂಬುದನ್ನು ತಿಳಿದುಕೊಂಡು 'ನಾನು ನಿನಗೆ ಉಪದೇಶಿಸಿದ ಅಸ್ತ್ರಗಳು ಸಕಾಲದಲ್ಲಿ ವಿಫಲವಾಗಲಿ' ಎಂದು ಶಪಿಸಿದರು." ಕರ್ಣನು ಹೇಳಿ ಮುಗಿಸಿದನು.

ಆಮೇಲೆ ಕರ್ಣನು ತನಗೆ ಬಂದ ಶಾಪವು ಫಲಿಸಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲೆಂದು ಮಂತ್ರವನ್ನು ಉಚ್ಚರಿಸಿದನು. ಅವೆಲ್ಲವೂ ನಿರ್ವೀರ್ಯವಾಗಿ ಕಂಡುವು.

ಕರ್ಣನ ಪರಿತಾಪ ಮತ್ತೂ ಹೆಚ್ಚಿತು. ಇನ್ನು ತಾನು ಹಲ್ಲು ಕಿತ್ತ ಹಾವಿನಂತೆಂದು ಅವನಿಗೆ ಮನವರಿಕೆಯಾಯಿತು. "ಅಯ್ಯೋ! ಏನಿದು? ಕುದುರೆಗಳು ದೈನ್ಯದಿಂದ ಕಣ್ಮುಚ್ಚಿ ಮೈಮರೆತು ತಪ್ಪು ಹೆಜ್ಜೆಯಿಡುತ್ತಿವೆ. ಆನೆಗಳಾದರೋ ದುರ್ಗಂಧ ಜಲವನ್ನು ಸುರಿಸುತ್ತಿವೆ. ಇದೇನು? ಇವು ಕಾಳಗದಲ್ಲಿ ಸೋಲನ್ನು ಸೂಚಿಸುವಂತೆ ತೋರುತ್ತಿದೆ! ರಣವಾದ್ಯಗಳು ನೀರವವಾಗಿವೆ!" ಕರ್ಣನು ಮುಂದೆ ಬರಬಹುದಾದ ಆಪತ್ತನ್ನು ನೆನೆದು ಖೇದದಿಂದ ನುಡಿದನು.

ಕರ್ಣನ ಮೇಲಿನ ಅನುಕಂಪೆಯಿಂದ ಶಲ್ಯನೂ ಸಂಕಟಕ್ಕೊಳಗಾದನು.

ಸೋಲಿನ ಮುನ್ಸೂಚನೆ ತೋರಿದರೂ ಕರ್ಣನು ಧೃತಿಗೆಡಲಿಲ್ಲ. "ಶಲ್ಯರಾಜ, ವಿಷಾದಪಡಬೇಡ. ಸತ್ತರೆ ಸ್ವರ್ಗ, ಗೆದ್ದರೆ ಸತ್ಕೀರ್ತಿ ಕೈಸೇರುವುದು. ಆದ್ದರಿಂದ ಯುದ್ಧವು ನಿಷ್ಪ್ರಯೋಜಕವಲ್ಲ. ಮತ್ತೇನೆಂದರೆ, ಕಾಂಭೋಜ ಕುಲದಲ್ಲಿ ಹುಟ್ಟಿದ ಈ ಅಶ್ವಗಳು ವೇಗದಲ್ಲಿ ಗರುಡನಿಗೆ ಸಮವಾಗಿವೆ. ಇವು ಎಂದಿಗೂ ಯುದ್ಧದಲ್ಲಿ ಹಿಮ್ಮೆಟ್ಟುವುದಿಲ್ಲ. ತಮ್ಮನ್ನು ಕಾಪಾಡಿದ ಸ್ವಾಮಿಯನ್ನು ರಕ್ಷಿಸದೆ ಇರುವುದಿಲ್ಲ." ಕರ್ಣನು ಧೀರವಾಣಿಯಿಂದ ನುಡಿದು ಒಂದೆರಡು ಕ್ಷಣ ಸುಮ್ಮನಾದನು.

ಮತ್ತೆ ರಣೋತ್ಸಾಹದಿಂದ ಆವೇಶಭರಿತನಾಗಿ ಕರ್ಣನು ತಾರಸ್ವರದಲ್ಲಿ "ಗೋಬ್ರಾಹ್ಮಣರಿಗೆ ಅಕ್ಷಯವಾಗಲಿ! ಪತಿವ್ರತೆಯರಿಗೆ ಅಕ್ಷಯವಾಗಲಿ! ಯುದ್ಧದಲ್ಲಿ ಹಿಮ್ಮೆಟ್ಟದ ವೀರರಿಗೆ ಅಕ್ಷಯವಾಗಲಿ! ಅವಸಾನ ಪ್ರಾಪ್ತವಾಗಿರುವ ನನಗೆ ಅಕ್ಷಯವಾಗಲಿ!" ಎಂದು ಘೋಷಿಸಿ "ಇನ್ನು, ಅಸಾಧ್ಯವೆನಿಸಿದ ಪಾಂಡವರ ಸಮರಮುಖಕ್ಕೆ ನುಗ್ಗಿ ಧರ್ಮರಾಯನನ್ನು ಹಿಡಿದು ಕಟ್ಟಿ, ಅರ್ಜುನನನ್ನು ಉರುಳಿಸುತ್ತೇನೆ. ಶಲ್ಯರಾಜ, ಅರ್ಜುನನು ಇರುವಲ್ಲಿಗೇ ರಥವನ್ನು ನಡೆಸು" ಎಂದನು.

ಆ ದಿನದ ಯುದ್ಧದಲ್ಲಿ ಗೆಲ್ಲಬೇಕು ಇಲ್ಲವೆ ಸಾಯಬೇಕಾಗುವುದೆಂದು ಕರ್ಣನಿಗೆ ಗೊತ್ತಾಗಿಹೋಗಿತ್ತು. ಆದರೂ ಅವನು ಹಿಂದೆ ಮುಂದೆ ಯೋಚಿಸಲಿಲ್ಲ.

ಶಲ್ಯನು ಅರ್ಜುನನಿದ್ದ ಸ್ಥಳಕ್ಕೇ ರಥವನ್ನು ಓಡಿಸುತ್ತಿದ್ದನು.

"ಅಯ್ಯಾ ಕರ್ಣ, ಒಂದು ಮಹತ್ತರವಾದ ಭಿಕ್ಷೆಯನ್ನು ಕೊಡಬೇಕು" ಎಂಬ ಧ್ವನಿ ಕೇಳಿಸಿತು.

ಕರ್ಣನು ಆ ಧ್ವನಿಯನ್ನು ಕಿವಿಗೊಟ್ಟು ಕೇಳಿ "ಓಹೋ, ಈ ಶಬ್ದವು ವೀರ್ಯವತ್ತಾಗಿದೆ. ಈ ನನ್ನ ಕುದುರೆಗಳು ಆ ವೀರ ಮಧುರಸ್ವರವನ್ನು ಕೇಳಿ ಕಿವಿಯನ್ನೆತ್ತಿ ಮುಂದೆ ಚಲಿಸದೆ, ಅಲುಗಾಡದೆ, ಕಣ್ಣೆವೆಯಿಕ್ಕದೆ ಚಿತ್ರದಲ್ಲಿ ಬರೆದಂತೆ ನಿಂತುಬಿಟ್ಟುವು. ಆದ್ದರಿಂದ ಅವನು ಮಹಿಮಾವಂತನಿರಬೇಕು. ಕೇವಲ ಬ್ರಾಹ್ಮಣನಲ್ಲ. ಆಗಲಿ, ಆ ಬ್ರಾಹ್ಮಣನನ್ನು ನಾನೇ ಕರೆಯುತ್ತೇನೆ. ಪೂಜ್ಯರೇ, ಇಲ್ಲಿ ಬರಬೇಕು" ಎಂದು ಕರೆದನು.

ಇಂದ್ರನು ತನ್ನ ಮಗನಾದ ಅರ್ಜುನನಿಗೆ ದಿಗ್ವಿಜಯವನ್ನು ಸಂಪಾದಿಸುವ ಉಪಾಯವನ್ನು ಹೂಡಿದ್ದನು. ಕರ್ಣನು ಪರಶುರಾಮನಿಂದ ಉಪದೇಶ ಪಡೆದಿದ್ದ ಮಹಾಸ್ತ್ರಗಳೆಲ್ಲವೂ ನಿರರ್ಥಕವಾಗಿದ್ದುವು. ಆದರೂ ಕರ್ಣನಲ್ಲಿ ದೇವಾಸುರರಿಗೂ ಅಭೇದ್ಯವಾದ ಸಹಜ ಕವಚ ಮತ್ತು ಕುಂಡಲಗಳಿದ್ದುವು. ಅವು ಇರುವತನಕ ಕರ್ಣನನ್ನು ಕೊಲ್ಲುವುದು ಯಾರಿಗೂ ಅಸಾಧ್ಯ, ಅವನ್ನು ಉಪಾಯವಾಗಿ ಅವನಿಂದ ಪಡೆಯಬೇಕೆಂದು ಇಂದ್ರನು ಯೋಚಿಸಿ ಬ್ರಾಹ್ಮಣನಂತೆ ವೇಷವನ್ನು ಮರೆಸಿ ಯುದ್ಧಭೂಮಿಯಲ್ಲಿ ಕಾಣಿಸಿಕೊಂಡು ಯಾಚಕನಂತೆ ಕರ್ಣನಿಂದ ಭಿಕ್ಷವನ್ನು ಬೇಡಿದನು.

ದಾನಶೀಲನಾದ ಕರ್ಣನು ತನ್ನ ಮುಂದೆ ಬಂದು ಕೈಯೊಡ್ಡಿದವನನ್ನು ಬರಿಗೈಯಿಂದ ಹಿಂದಕ್ಕೆ ಕಳುಹಿಸಿದವನಲ್ಲ. ಅಂದಿನ ಯುದ್ಧಕ್ಕೆ ತೊಡಗುವ ಮುನ್ನ ಬ್ರಾಹ್ಮಣನಿಗೆ ದಾನ ಮಾಡುವುದು ಅವನಿಗೆ ಆನಂದವನಿಸಿತು. ಆ ಯುದ್ಧಭೂಮಿಯಲ್ಲಿ ಆ ಬ್ರಾಹ್ಮಣನ ಧೀರಸ್ವರವನ್ನು ಕೇಳಿ ಆಶ್ಚರ್ಯವಾದರೂ ಅವನು "ಪೂಜ್ಯರೇ, ಈ ಕಡೆ ಬನ್ನಿ" ಎಂದು ವಿನಯ ಮತ್ತು ಸಂತೋಷದಿಂದ ಕರೆದು ರಥದಿಂದ ಇಳಿದು ನಿಂತನು.

ಬ್ರಾಹ್ಮಣ ವೇಷಧಾರಿಯಾದ ಇಂದ್ರನು ತನ್ನ ಅನುಯಾಯಿಗಳಾದ ಮೇಘಗಳನ್ನು ಒಂದಕ್ಕೆ ಕಳುಹಿಸಿ ಕರ್ಣನ ಹತ್ತಿರ ಹೋಗಿ "ಅಯ್ಯಾ ಕರ್ಣ, ನಾನು ಮಹತ್ತರವಾದ ಭಿಕ್ಷೆಯನ್ನು ಬೇಡುತ್ತೇನೆ" ಎಂದನು.

ಕರ್ಣನು "ಪೂಜ್ಯರೇ, ನನಗೆ ಬಹಳ ಸಂತೋಷವಾಯಿತು. ನಾನಿಂದು ಧನ್ಯಾತ್ಮರಾದವರ ಗುಂಪಿನಲ್ಲಿ ಸೇರಿದೆ. ಬ್ರಾಹ್ಮಣರ ಕಾಲ್ಧೂಳಿಯಿಂದ ಪವಿತ್ರವಾದ ಕಿರೀಟವನ್ನು ಧರಿಸಿರುವ ಕರ್ಣನು ಪೂಜ್ಯರ ಕಾಲಿಗೆ ಇದೋ ನಮಸ್ಕರಿಸುವೆನು" ಭಕ್ತಿಯಿಂದ ಆ ಬ್ರಾಹ್ಮಣನಿಗೆ ನಮಸ್ಕರಿಸಿದನು.

ಕ್ಷತ್ರಿಯನು ಬ್ರಾಹ್ಮಣನಿಗೆ ನಮಸ್ಕರಿಸಿದಾಗ ಬ್ರಾಹ್ಮಣನು ಆಶೀರ್ವದಿಸಬೇಕು. ಆದರೆ ಆ ಕಪಟ ಬ್ರಾಹ್ಮಣನಿಗೆ ಏನೆಂದು ಆಶೀರ್ವದಿಸುವುದೆಂದು ಯೋಚನೆ ಹುಟ್ಟಿಕೊಂಡಿತು. "ಈಗ ಏನು ಹೇಳಲಿ? ದೀರ್ಘಾಯುವಾಗೆಂದರೆ ದೀರ್ಘಾಯುವಾಗುತ್ತಾನೆ. ಹರಸದಿದ್ದರೆ ಇವನು ಮೂರ್ಖನೆಂದು ಭಾವಿಸುತ್ತಾನೆ. ಆದ್ದರಿಂದ ಏನು ಹೇಳಲಿ?" ಎಂದು ಅವನು ತನ್ನಲ್ಲೇ ಸ್ವಲ್ಪ ಕಾಲ ಯೋಚಿಸಿದನು. ಆಮೇಲೆ "ಅಯ್ಯಾ ಕರ್ಣ, ಸೂರ್ಯನಂತೆ, ಹಿಮವಂತನಂತೆ, ಸಾಗರದಂತೆ ನಿನ್ನ ಯಶಸ್ಸು ನಿಂತಿರಲಿ" ಎಂದು ಹರಸಿದನು.

ಕರ್ಣನು "ಪೂಜ್ಯರೇ, ದೀರ್ಘಾಯುವಾಗೆಂದು ಹರಸಬಾರದೆ? ಅಥವಾ ಇದೇ ನನಗೆ ಪ್ರಿಯವಾದುದು. ಏಕೆಂದರೆ ಸರ್ವಪ್ರಯತ್ನದಿಂದ ಧರ್ಮವನ್ನು ಸಾಧಿಸಬೇಕು. ಹಾವಿನ ನಾಲಿಗೆಯಂತೆ ರಾಜ್ಯಸಿರಿ ಚಂಚಲವಾದುದು. ಆದ್ದರಿಂದ ಪ್ರಜಾಪಾಲನೆಯಲ್ಲಿ ದೇಹ ನಾಶವಾದರೂ ಗುಣಗಳು ಉಳಿಯುತ್ತವೆ. ಪೂಜ್ಯರೇ, ಈಗ ನಿಮಗೆ ನನ್ನಿಂದೇನಾಗಬೇಕು?" ಎಂದು ಕೇಳಿದನು.

"ನಾನು ಮಹತ್ತರವಾದ ಭಿಕ್ಷವನ್ನು ಬೇಡುತ್ತೇನೆ" ಇಂದ್ರನು ಹೇಳಿದನು.

"ಆಗಲಿ. ಮಹತ್ತರವಾದ ಭಿಕ್ಷವನ್ನೇ ಕೊಡುತ್ತೇನೆ. ನನ್ನ ಸಂಪತ್ತನ್ನು ಕೇಳಿ. ನನ್ನ ಬಳಿ ಅಮೃತಕ್ಕೆ ಸಮಾನವಾದ ಹಾಲನ್ನು ಕೊಡುವಂತಹ ತರುಣ ಗೋವುಗಳಿವೆ. ಪೂಜ್ಯರೇ, ನಿಮಗೆ ಈ ಗೋಧನದಲ್ಲಿ ಆಸೆಯಿದ್ದರೆ ಕನಕಶೃಂಗಗಳನ್ನು ತೊಡಿಸಿ ಒಂದು ಸಹಸ್ರ ಗೋವುಗಳನ್ನು ಕೊಡುತ್ತೇನೆ. ಆಗಬಹುದೆ?" ಕರ್ಣನು ಸಂತೋಷದಿಂದ ಕೇಳಿದನು.

"ಗೋಸಹಸ್ರವನ್ನೇ? ಅವುಗಳಿಂದ ಮುಹೂರ್ತಕಾಲ ಹಾಲು ಕುಡಿಯಬಹುದು. ಕರ್ಣ, ಅವುಗಳಲ್ಲಿ ನನಗೆ ಇಷ್ಟವಿಲ್ಲ" ಇಂದ್ರನು ಉತ್ತರಿಸಿದನು.

"ಆಗಲಿ, ಪೂಜ್ಯರೇ. ಇದನ್ನು ಕೇಳಿ: ಸೂರ್ಯನ ಕುದುರೆಗಳಿಗೆ ಸಮಾನವಾದ ಮತ್ತು ಪ್ರಖ್ಯಾತವಾದ ಕಾಂಭೋಜ ಕುಲದಲ್ಲಿ ಹುಟ್ಟಿದ ವಾಯುವೇಗವುಳ್ಳ ಪ್ರ[illegible] ಇಂಥ ಅನೇಕ ಸಹಸ್ರ ಕುದುರೆಗಳನ್ನು ಕೊಡುತ್ತೇನೆ.

ಅದಕ್ಕೂ ಇಂದ್ರನು "ಏನು, ಕುದುರೆಯೆ? ಅವುಗಳ ಮೇಲೆ ಮುಹೂರ್ತ ಕಾಲ ಹತ್ತಬಹುದು. ಕರ್ಣ, ಅವುಗಳಲ್ಲಿ ನನಗೆ ಆಸೆಯಿಲ್ಲ" ಎಂದನು.

"ಏನು, ಪೂಜ್ಯರಿಗೆ ಬೇಡವೆ? ಆಗಲಿ. ಮತ್ತೊಂದನ್ನು ಹೇಳುತ್ತೇನೆ. ಗಿರಿಸಮೂಹದಂತಿರುವ, ಮೇಘದಂತೆ ಗಂಭೀರ ಘೋಷದಿಂದ ಘೀಳಿಡುವ, ಮತ್ತು ಯುದ್ಧದಲ್ಲಿ ಶತ್ರುಗಳನ್ನು ಕೊಲ್ಲಬಲ್ಲ ಅನೇಕ ಆನೆಗಳ ಹಿಂಡನ್ನೇ ಕೊಡುವೆನು" ಕರ್ಣನು ಪ್ರೀತಿಯಿಂದ ಹೇಳಿದನು.

ಇಂದ್ರನು ಮೊದಲಿನಂತೆಯೇ "ಕರ್ಣ, ನನಗೆ ಬೇಡ. ಅವುಗಳ ಮೇಲೆ ಮುಹೂರ್ತಕಾಲ ಮಾತ್ರ ಹತ್ತಬಹುದು" ಎಂದು ತಲೆಯಲ್ಲಾಡಿಸಿದನು.

"ಮತ್ತೊಂದನ್ನು ಹೇಳುತ್ತೇನೆ, ಕೇಳಿ. ಲೆಕ್ಕವಿಲ್ಲದಷ್ಟು ಚಿನ್ನವನ್ನು ಕೊಡುತ್ತೇನೆ. ಆಗಬಹುದೆ?"

"ಆಗಲಿ, ತೆಗೆದುಕೊಂಡು ಹೋಗುತ್ತೇನೆ" ಇಂದ್ರನು ಹೊನ್ನಿಗೆ ಸೋತವನಂತೆ ನಟಿಸುತ್ತಾ ಸ್ವಲ್ಪ ದೂರ ಅಲ್ಲಿಂದ ಹೋಗಿ ಮತ್ತೆ ಕರ್ಣನ ಬಳಿಗೆ ಬಂದು "ಕರ್ಣ, ನನಗೆ ಇಚ್ಛೆಯಿಲ್ಲ" ಎಂದನು.

"ಹಾಗಾದರೆ ಜಗತ್ತನ್ನೇ ಗೆದ್ದು ಕೊಡುತ್ತೇನೆ" ಕರ್ಣನು ಹೇಳಿದನು.

ಇಂದ್ರನು ಅದನ್ನು ತೆಗೆದುಕೊಂಡು ತಾನೇನು ಮಾಡಲೆಂದನು. ಆಮೇಲೆ ಕರ್ಣನು ಅಗ್ನಿಷ್ಟೋಮದ ಫಲವನ್ನು ಕೊಡುವೆನೆಂದರೂ ಇಂದ್ರನು ಅದನ್ನೂ ನಿರಾಕರಿಸಿಬಿಟ್ಟನು.

ಕರ್ಣನು ತನ್ನ ವೈಭವಗಳನ್ನೆಲ್ಲಾ ಹೇಳಿ ಮುಗಿಸಿದನು. ಅವುಗಳಲ್ಲಿ ಯಾವುವೂ ಆ ಕಪಟ ಬ್ರಾಹ್ಮಣನಿಗೆ ಬೇಡವಾದುವು. ಅದರಿಂದ ಕರ್ಣನಿಗೆ ವ್ಯಥೆಯಾಯಿತು. ದಾನ ಕೊಡದೆ ಬ್ರಾಹ್ಮಣನನ್ನು ಹಾಗೆಯೇ ಕಳುಹಿಸಲು ಅವನ ಮನಸ್ಸು ಒಪ್ಪದು. ಇಂದ್ರನೂ ತನಗೇನು ಬೇಕೆಂಬುದನ್ನು ಬಾಯಿಬಿಟ್ಟು ಕೇಳಲೊಲ್ಲ. ಆಗ ಕರ್ಣನು ಸ್ವಲ್ಪ ಯೋಚಿಸಿ ಅನುಮಾನಿಸದೆ "ಪೂಜ್ಯರೇ, ಹಾಗಾದರೆ ನನ್ನ ತಲೆಯನ್ನೇ ಕೊಡುತ್ತೇನೆ" ಎಂದನು.

ಆಗ ಕಪಟ ಬ್ರಾಹ್ಮಣನು "ಅಯ್ಯೋ, ಅಯ್ಯೋ" ಎಂದು ಉದ್ಗರಿಸಿದನು, ಇಂಥ ದಾನವನ್ನು ತಾನು ಅಪೇಕ್ಷಿಸಲಿಲ್ಲವೆಂದು ದುಃಖವನ್ನು ಸೂಚಿಸುವವನಂತೆ.

ಆಮೇಲೆ ಆ ಬ್ರಾಹ್ಮಣನಿಗೆ ಏನು ಕೊಡುವುದೆಂದು ಕರ್ಣನಿಗೆ ಯೋಚನೆಗಿಟ್ಟುಕೊಂಡಿತು. ಅವನಿಗೆ ತನ್ನಲ್ಲಿದ್ದ ಸಹಜ ಕವಚ ಕುಂಡಲಗಳ ನೆನಪಾಯಿತು.

"ಪೂಜ್ಯರೇ, ಹೆದರಬೇಡಿ. ಸತ್ಯವನ್ನು ಹೇಳುತ್ತೇನೆ, ಕೇಳಿ. ನನ್ನ ದೇಹದೊಡನೆ ಸಹಜವಾಗಿ ಹುಟ್ಟಿ ನನ್ನ ದೇಹರಕ್ಷೆಯಾಗಿರುವ ಈ ಕವಚವಿದೆ. ಇದನ್ನು ಛೇದಿಸಲು ದೇವಾಸುರರಿಗೂ ಆಗದು. ನಿಮಗೆ ಒಪ್ಪಿಗೆಯಾದರೆ ಈ ಕವಚ ಮತ್ತು ಕುಂಡಲಗಳನ್ನು ಅಸ್ತ್ರಗಳೊಡನೆ ಇಟ್ಟು ಪ್ರೀತಿಯಿಂದ ಕೊಡುತ್ತೇನೆ" ಎಂದನು.

ಇಂದ್ರನಿಗೆ ಬೇಕಾಗಿದ್ದುದೂ ಅದೇ. ಕರ್ಣನ ಬಾಯಿಂದಲೇ ಆ ಮಾತನ್ನು ಹೇಳಿಸಲು ಇಷ್ಟು ಹೊತ್ತು ಪ್ರಯತ್ನಿಸಿದ್ದನು.

ಕರ್ಣನ ಮಾತನ್ನು ಕೇಳಿ ಅವನು ಹರ್ಷದಿಂದ "ಕೊಡು, ಕೊಡು" ಎಂದನು. ಯಾವುದನ್ನೂ ಬೇಡವೆಂದು, ಕವಚವನ್ನು ಮಾತ್ರ ಇಂದ್ರನು ಬೇಕೆಂದುದರಿಂದ ಕರ್ಣನಿಗೆ ಸಂಶಯವಾಯಿತು. 'ಇದು ಕಪಟ ಬುದ್ಧಿಯ ಕೃಷ್ಣನ ಉಪಾಯವಾಗಿರಬಹುದೆ? ಅವನೇ ಆದರೂ ಸರಿಯೆ. ಈಗ ದುಃಖಿಸುವುದು ಸರಿಯಲ್ಲ, ಎಂದು ಕರ್ಣನು ತನ್ನಲ್ಲಿ ಅಂದುಕೊಂಡು ಕೊಡಲು ತೀರ್ಮಾನಿಸಿದನು. ಆಮೇಲೆ "ತೆಗೆದುಕೊಳ್ಳಬೇಕು" ಎಂದನು.

ಶಲ್ಯನಿಗೆ ಕರ್ಣನ ದಾನ ಸರಿಯೆನಿಸಲಿಲ್ಲ. ಅವನು ಇದುವರೆಗೂ ಮೌನವಾಗಿದ್ದು ಅವರ ಮಾತನ್ನೆಲ್ಲ ಕೇಳುತ್ತಿದ್ದನು. ಆ ಬ್ರಾಹ್ಮಣನು ನಿಜವಾದ ಬ್ರಾಹ್ಮಣನಲ್ಲವೆಂದು ಅವನಿಗೂ ಸಂಶಯವಾಯಿತು.

ಆದ್ದರಿಂದ ಅವನು "ಅಂಗರಾಜ, ಕೊಡಬೇಡ, ಕೊಡಬೇಡ" ಎಂದನು. ಕೊಡುವೆನೆಂದು ಹೇಳಿ ಮಾತಿಗೆ ತಪ್ಪುವುದು ಕರ್ಣನಿಂದಾಗಲಿಲ್ಲ. ಆ ಬ್ರಾಹ್ಮಣನಿಗೆ ತನ್ನ ಕವಚವನ್ನು ದಾನ ಕೊಡುವುದಕ್ಕಿಂತ ತನ್ನ ಜೀವ ರಕ್ಷಣೆಯು ಮೇಲೆಂದು ಅವನು ಎಣಿಸಲಿಲ್ಲ.

ಆದ್ದರಿಂದ "ಶಲ್ಯರಾಜ, ತಡೆಯಬೇಡ. ಕಾಲವುರುಳಲು ಕಲಿತ ವಿದ್ಯೆ ನಾಶವಾಗುವುದು. ಆದರೆ ಪರರಿಗೆ ಕೊಟ್ಟದ್ದು ಮತ್ತು ಯಜ್ಞದ ಪುಣ್ಯಗಳು ಮಾತ್ರ ಉಳಿಯುತ್ತವೆ. ಆದ್ದರಿಂದ ತೆಗೆದುಕೊಳ್ಳಬೇಕು" ಎಂದು ದೃಢ ಸ್ವರದಲ್ಲಿ ಕರ್ಣನು ಹೇಳಿದನು.

ಬಳಿಕ ಕವಚವನ್ನು ಪರಪರನೆ ಕತ್ತರಿಸಿ ಆ ಬ್ರಾಹ್ಮಣನ ಕೈಗಿತ್ತನು.

ಇಂದ್ರನ ಪ್ರಯತ್ನ ಸಫಲವಾಯಿತು. ಕರ್ಣನು ಕೊಟ್ಟ ಕವಚವನ್ನು ತೆಗೆದುಕೊಂಡು 'ಅರ್ಜುನನ ಗೆಲುವಿಗಾಗಿ ಹಿಂದೆ ದೇವತೆಗಳೆಲ್ಲರೂ ನಿರ್ಧರಿಸಿದಂತೆ ಈಗ

ನಾಶ ಮಾಡಿಯಾಯಿತು. ಇನ್ನು ನಾನೂ ಐರಾವತವನ್ನು ಹತ್ತಿ ಕರ್ಣಾರ್ಜುನರ ಯುದ್ಧವನ್ನು ನೋಡುತ್ತೇನೆ' ಎಂದು ತನ್ನಲ್ಲಿ ಅಂದುಕೊಂಡು, ಇಂದ್ರನು ಸ್ವಲ್ಪ ದೂರ ಹೋಗಿ ಅದೃಶ್ಯನಾದನು.

ಇಂದ್ರನಿಂದ ಕರ್ಣನು ವಂಚಿತನಾದನೆಂದು ಶಲ್ಯನಿಗೆ ಅನ್ನಿಸಿತು. ಅವನಿಗೆ ಕರ್ಣನ ಮೇಲೆ ಕನಿಕರ ಹುಟ್ಟಿತು. "ಅಯ್ಯೋ ಅಂಗರಾಜ, ನೀನು ಶಕ್ರನಿಂದ ವಂಚಿತನಾದೆಯಲ್ಲ!" ಎಂದು ಅವನು ಕರ್ಣನಿಗೆ ಹೇಳಿದನು.

ಆದರೆ ಕರ್ಣನು ತಾನು ವಂಚಿತನಾದೆನೆಂದು ಭಾವಿಸಿರಲಿಲ್ಲ. ಆದ್ದರಿಂದ ಅವನು ಶಲ್ಯನನ್ನು ಕುರಿತು "ಇಲ್ಲ, ಶಕ್ರನೇ ನನ್ನಿಂದ ವಂಚಿತನಾದನು. ಏಕೆಂದರೆ ಬ್ರಾಹ್ಮಣರು ಮಾಡಿದ ಅನೇಕ ಯಜ್ಞಗಳಲ್ಲಿ ಆಹುತಿಯನ್ನು ಸ್ವೀಕರಿಸಿ ತೃಪ್ತನಾಗಿಯೂ ಅರ್ಜುನನನ್ನು ಮಗನಾಗಿ ಪಡೆದೂ ರಾಕ್ಷಸರನ್ನು ಸದೆಬಡಿದೂ ಇರುವ ಶಕ್ರನೇ ಇಂದು ನನ್ನನ್ನು ಬೇಡಿ ಕೃತಾರ್ಥನಾಗಬೇಕಾಯಿತು" ಎಂದು ಸ್ವಲ್ಪವೂ ದುಃಖಿಸದೆ ಹೇಳಿದನು.

ಇಂದ್ರನು ಕರ್ಣನ ದಾನಗಳನ್ನು ಮೆಚ್ಚಿಕೊಂಡನು. ತಾನು ಹಾಗೆ ಕರ್ಣನನ್ನು ವಂಚಿಸಿ ಅವನಿಂದ ಸಹಜ ಕವಚಕುಂಡಲಗಳನ್ನು ಪಡೆದುದಕ್ಕೆ ಅವನಿಗೆ ಪಶ್ಚಾತ್ತಾಪವಾಯಿತು. ತನ್ನ ಸರ್ವಸ್ವವನ್ನೂ ಕಳೆದುಕೊಂಡಿದ್ದ ಕರ್ಣನ ಮೇಲೆ ಅವನಿಗೆ ಕನಿಕರ ಹುಟ್ಟಿತು. ಆದ್ದರಿಂದ ದೇವದೂತನ ಕೈಯಲ್ಲಿ ಒಂದು ಅಮೋಘಾಸ್ತ್ರವನ್ನು ಕರ್ಣನಿಗೆ ಕೊಡಲು ಅವನು ಕಳುಹಿಸಿಕೊಟ್ಟನು.

ದೇವದೂತನು ಬ್ರಾಹ್ಮಣನ ರೂಪಿನಿಂದ ಕರ್ಣನ ಸಮೀಪಕ್ಕೆ ಹೋಗಿ "ಅಯ್ಯಾ, ಕರ್ಣ, ನಿನ್ನಿಂದ ಕವಚ ಕುಂಡಲಗಳನ್ನು ತೆಗೆದುಕೊಂಡ ಇಂದ್ರನು ಪಶ್ಚಾತ್ತಾಪಪಟ್ಟು ನಿನ್ನನ್ನು ಅನುಗ್ರಹಿಸಿದ್ದಾನೆ. ಪಾಂಡವರಲ್ಲೊಬ್ಬನನ್ನು ಕೊಲ್ಲುವುದಕ್ಕಾಗಿ 'ವಿಮಲಾ' ಎಂಬ ಈ ಶಕ್ತಿಯನ್ನು ತೆಗೆದುಕೊ" ಎಂದು ಕೊಡ ಹೋದನು. ಕರ್ಣನು ಕೊಟ್ಟದ್ದಕ್ಕೆ ತಾನು ಪ್ರತಿಯಾಗಿ ಏನನ್ನೂ ತೆಗೆದುಕೊಳ್ಳುವುದಿಲ್ಲವೆಂದನು. ದೇವದೂತನು "ಬ್ರಾಹ್ಮಣನ ಮಾತಿಗನುಸಾರವಾಗಿ ತೆಗೆದುಕೊ" ಎಂದು ಮತ್ತೆ ಹೇಳಿದನು.

"ಆಗಲಿ. ಬ್ರಾಹ್ಮಣರ ಮಾತನ್ನು ನಾನೆಂದೂ ಮೀರಿಲ್ಲ. ನನಗೆ ಅದು ಯಾವಾಗ ದೊರೆಯುತ್ತದೆ?" ಕರ್ಣನು ಕೇಳಿದನು.

"ನೀನು ಯಾವಾಗ ಸ್ಮರಿಸುವೆಯೋ ಆಗ ದೊರೆಯುತ್ತದೆ" ಎಂದು ಹೇಳಿ ದೇವದೂತನು ಹಿಂದಿರುಗಿದನು.

ಕರ್ಣ ಶಲ್ಯರು ರಥವನ್ನು ಹತ್ತಿದರು. ಅಷ್ಟರಲ್ಲಿ ಗದ್ದಲ ಕೇಳಿಬಂತು. ಕರ್ಣನು "ಪ್ರಳಯಕಾಲದ ಸಮುದ್ರಘೋಷಕ್ಕೆ ಸಮನಾದ ಶಂಖ ಧ್ವನಿ ಕೇಳಿಬರುತ್ತಿದೆ. ಇದು ಕೃಷ್ಣಾರ್ಜುನರಲ್ಲಿ ಒಬ್ಬನದಾಗಿರಬೇಕು. ಯುಧಿಷ್ಠಿರನ ಸೋಲಿನಿಂದ ಅರ್ಜುನನು ಕೋಪಿಸಿಕೊಂಡು ಇಂದು ತನ್ನ ಶಕ್ತಿಗೊಪ್ಪುವಂತೆ ಯುದ್ಧವನ್ನು ಮಾಡಿದನು. ಶಲ್ಯರಾಜ, ಅರ್ಜುನನಿರುವಲ್ಲಿಗೇ ನನ್ನ ರಥವನ್ನು ನಡೆಸು" ಎಂದನು.

ಶಲ್ಯನು ಕಡಿವಾಣವನ್ನು ಹಿಡಿದು ಕುದುರೆಗಳನ್ನು ಚಪ್ಪರಿಸಿದನು. ರಥವು ವೇಗವಾಗಿ ಧಾವಿಸತೊಡಗಿತು.



# ಊರುಭಂಗ

ಮಹಾಭಾರತ ಯುದ್ಧವು ಹದಿನೆಂಟು ದಿನಗಳ ಕಾಲ ನಡೆಯಿತು. ಆ ಹದಿನೆಂಟು ದಿನಗಳಲ್ಲಿ ಕೌರವರ ಹನ್ನೊಂದು ಅಕ್ಷೋಹಿಣಿ ಸೈನ್ಯವೂ ಪಾಂಡವರ ಏಳು ಅಕ್ಷೋಹಿಣಿ ಸೈನ್ಯವೂ ಹತವಾಗಿ ಕುರುಕ್ಷೇತ್ರ ಭೂಮಿಯು ಶವರಾಶಿಗಳಿಂದ ಕಿಕ್ಕಿರಿದು ಹೋಗಿತ್ತು. ಕೌರವರ ಪಕ್ಷದಲ್ಲಿ ದುರ್ಯೋಧನನೂ, ಪಾಂಡವರ ಪಕ್ಷದಲ್ಲಿ ಪಂಚಪಾಂಡವರು ಮತ್ತು ಕೃಷ್ಣನೂ ಉಳಿದುಕೊಂಡರು. ಭೀಮನ ಊರುಭಂಗ ಪ್ರತಿಜ್ಞೆಯು ಇನ್ನೂ ನೆರವೇರಿರಲಿಲ್ಲ.

ಯುದ್ಧಭೂಮಿಯು ನೋಡುವುದಕ್ಕೆ ಭಯಂಕರವಾಗಿತ್ತು. ಸತ್ತ ಆನೆಗಳು ಕುಸಿದುಬಿದ್ದ ಬೆಟ್ಟವನ್ನು ಹೋಲುತ್ತಿದ್ದವು. ವೀರರೆಲ್ಲಾ ಮಡಿದುದರಿಂದ ಅವರ ರಥಗಳೇ ಹದ್ದುಗಳಿಗೆ ಗೂಡಾಗಿದ್ದವು. ಹದ್ದುಗಳು ಹೆಣವನ್ನು ಮುತ್ತಿ ಕೊಂಡು ರಕ್ತದಲ್ಲಿ ನೆನೆದಿದ್ದ ಕೊಕ್ಕಿನಿಂದ ಕುಕ್ಕುತ್ತ ಹೆಣಗಳ ಮೇಲಿದ್ದ ಆಭರಣ ಗಳನ್ನು ಬಿಸಾಡುತ್ತಿದ್ದವು.

ಎತ್ತ ನೋಡಿದರೂ ಹೆಣಗಳನ್ನು ಕಿತ್ತು ತಿನ್ನುವ ಹದ್ದು ಕಾಗೆ ನರಿಗಳ ಹಿಂಡು ಕಾಣಿಸುತ್ತಿತ್ತು. ಎತ್ತ ನೋಡಿದರೂ ಆನೆ ಕುದುರೆ ಮತ್ತು ಯೋಧರ ಹೆಣ ಗಳು. ಎಲ್ಲೆಲ್ಲಿಯೂ ಕಾಲಿಕ್ಕಲಾಗದಂತೆ ಅನೇಕ ಬಗೆಯ ಆಯುಧಗಳು ಮುರಿದು ಬಿದ್ದಿದ್ದವು. ರಕ್ತದಿಂದ ನೆಲವೆಲ್ಲ ಕೆಸರಾಗಿ ಹೋಗಿತ್ತು. ಎತ್ತಲೂ ರಕ್ತದ ಪ್ರವಾಹವು ಹರಿಯುತ್ತಿತ್ತು. ಆ ನೆತ್ತರಿನ ಹೊನಲನ್ನು ದಾಟಲು ಸತ್ತು ಬಿದ್ದಿದ್ದ ಆನೆಗಳೇ ಸೇತುವೆಯಾಗಿದ್ದುವು. ರಥಿಕರು ಮಡಿದರೂ ಕೆಲವು ಕುದುರೆಗಳು ಮೊದಲಿನಂತೆಯೇ ರಥವನ್ನು ಎಳೆದುಕೊಂಡು ಭ್ರಾಂತಿಯಿಂದ ಓಡುತ್ತಿದ್ದವು. ಕೆಲವು ಆನೆಗಳು ಮಾವಟಿಗರಿಲ್ಲದಿದ್ದರೂ ಹಿಂದಿನಂತೆ ಮನ ಬಂದತ್ತ ಸುತ್ತುತ್ತಿದ್ದುವು.

ಪಾಂಡವರು ಕೃಷ್ಣನನ್ನು ಮುಂದಿಟ್ಟುಕೊಂಡು ದ್ವೈಪಾಯನವೆಂಬ ಕೊಳದಲ್ಲಿ ಜಲಸ್ತಂಭನ ವಿದ್ಯೆಯಿಂದ ಅಡಗಿಕೊಂಡಿದ್ದ ಕೌರವನನ್ನು ಮೂದಲಿಸಿ ಯುದ್ಧಕ್ಕೆ ಕರೆದರು. ಅವರ ಮೂದಲಿಕೆಯನ್ನು ಸಹಿಸಲಾರದೆ ದುರ್ಯೋಧನನು ತನ್ನ ಗದಾದಂಡವನ್ನು ಬೀಸುತ್ತಾ ಕೊಳದಿಂದ ಹೊರಕ್ಕೆ ಬಂದನು.

ಅಷ್ಟರಲ್ಲಿ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಅಲ್ಲಿಗೆ ಬಲರಾಮನೂ ಬಂದನು. ಬಲರಾಮನು ಭೀಮ ದುರ್ಯೋಧನರಿಗೆ ಗದಾ ವಿದ್ಯೆಯನ್ನು ಕಲಿಸಿ

ಕೊಟ್ಟ ಗುರು. ಅವನ ಸಮಕ್ಷಮದಲ್ಲಿ ಭೀಮ ದುರ್ಯೋಧನರಿಗೆ ಗದಾಯುದ್ಧವು ಪ್ರಾರಂಭವಾಯಿತು.

ಭೀಮ ದುರ್ಯೋಧನರು ಮದಿಸಿದ ಆನೆಗಳಂತೆ ತಮ್ಮ ಗದಾದಂಡಗಳನ್ನು ಭಯಂಕರವಾಗಿ ತಿರುಗಿಸುತ್ತ ಭೀಷಣರೋಷದಿಂದ ಪರಸ್ಪರ ಮೂದಲಿಸುತ್ತಾ ತಾಗಿದರು.

ಮೋಡಗಳು ಗುಡುಗುವುವೋ, ವಜ್ರಾಘಾತಕ್ಕೆ ಪರ್ವತಗಳು ಒಡೆಯುತ್ತಿರುವುವೋ ಅಥವಾ ಭೂಮಿಯು ಬಿರಿದು ಬಾಯಿಬಿಟ್ಟು ಸೀಳುವುದೋ ಅಥವಾ ಬಿರುಗಾಳಿಯು ಹೊಡೆತಕ್ಕೆ ಕಡಲುಕ್ಕಿ ದೊಡ್ಡ ಅಪ್ಪಳಿಸಿದ್ದು ಮಂದರ ಗಿರಿಯನ್ನು ನಡುಗಿಸುವುದೋ ಎನ್ನುವಂತೆ ಭಯಂಕರವಾದ ಮಹಾ ಶಬ್ದವುಂಟಾಯಿತು. ಭೀಮ ದುರ್ಯೋಧನರ ಗದೆಗಳ ಶಬ್ದವು ಅದ್ಭುತವಾಯಿತು.

ಕ್ರೋಧದಿಂದ ದುರ್ಯೋಧನನ ಕಣ್ಣುಗಳು ಕೆಂಪಗಾಗಿದ್ದುವು. ಕೈಲಾಸಪರ್ವತ ಶಿಖರದ ತುದಿಯಲ್ಲಿ ನಿಂತ ಮಹೇಂದ್ರನ ವಜ್ರಾಯುಧದಂತೆ ರಿಪುರಕ್ತದಲ್ಲಿ ನೆನೆದು ಕಠೋರವಾದ ದುರ್ಯೋಧನನ ಗದಾದಂಡವು ಅವನ ಕೈಯಲ್ಲಿ ಕಂಗೊಳಿಸುತ್ತಿತ್ತು.

ಭೀಮನ ಹಣೆಗೆ ಏಟು ಬಿದ್ದು ರಕ್ತ ಹರಿಯುತ್ತಿತ್ತು. ಧಾತು ಸಲಿಲದ ಪ್ರವಾಹದಿಂದ ನೆನೆದ ಕಲ್ಲುಗಳನ್ನುಳ್ಳ ಮೇರುಗಿರಿಯಂತೆ ಭೀಮನು ಗದೆಯ ಹೊಡೆತಕ್ಕೆ ಗಾಯಗೊಂಡು ರಕ್ತ ಸುರಿಸುತ್ತ ಶೋಭಿಸುತ್ತಿದ್ದನು. ಅವನು ಗದೆಯನ್ನು ಬೀಸಿ ಬಾಗಿ ಜೊಪ್ಪರಿಯುತ್ತ ದುರ್ಯೋಧನನ ಏಟಿಗೆ ಸಿಕ್ಕದೆ ಯುದ್ಧ ಮಾಡುತ್ತಿದ್ದನು.

ಆದರೂ ಗದಾವಿದ್ಯೆಯಲ್ಲಿ ದುರ್ಯೋಧನನ ಮುಂದೆ ಬಲಶಾಲಿಯಾದ ಭೀಮನ ಆಟ ಸಾಗದಾಯಿತು. ಗದಾಘಾತಕ್ಕೆ ತಡೆಯಲಾರದೆ ಭೀಮನು ವಜ್ರಾಘಾತದಿಂದ ನೆಲಕ್ಕುರುಳುವ ಹೇಮಕೂಟ ಪರ್ವತದಂತೆ ಕೆಳಕ್ಕೆ ಬಿದ್ದನು. ಕೌರವನ ಕೈಮೇಲಾಯಿತು. ಅವನ ಬಲವಾದ ಪೆಟ್ಟನ್ನು ಭೀಮನಿಂದ ತಡೆಯಲಾಗಲಿಲ್ಲ.

ಭೀಮ ದುರ್ಯೋಧನರ ಗದಾಯುದ್ಧವನ್ನು ನೋಡುತ್ತ ನಿಂತಿದ್ದ ವ್ಯಾಸ ಮಹರ್ಷಿಯು ಗಲ್ಲಕ್ಕೆ ಬೆರಳಿಟ್ಟುಕೊಂಡು ಆಶ್ಚರ್ಯದಿಂದ ಮೇಲೆ ನೋಡುತ್ತಾ ನಿಂತನು. ಯುಧಿಷ್ಠಿರನು ದೈನ್ಯವನ್ನು ತಾಳಿದನು. ವಿದುರನು ಕಂಬನಿ ಮಿಡಿದನು. ಅರ್ಜುನನು ಗಾಂಡೀವಕ್ಕೆ ಕೈಚಾಚಿದನು. ಕೃಷ್ಣನು ಆಕಾಶವನ್ನು ದೃಷ್ಟಿಸುತ್ತಿದ್ದನು.

ಬಲರಾಮನು ತನ್ನ ಶಿಷ್ಯನ ಜಯದಿಂದ ಹರ್ಷಗೊಂಡು ನಲಿಯುತ್ತ ನೇಗಿಲನ್ನು ಗಿರಗಿರನೆ ತಿರುಗಿಸುತ್ತಿದ್ದನು.

ದುರ್ಯೋಧನನು ನಗುತ್ತ ಭೀಮನನ್ನು ಕುರಿತು "ಭೀಮ, ಭಯವನ್ನು ಬಿಡು. ಯುದ್ಧದಲ್ಲಿ ದೀನನನ್ನು ವೀರಪುರುಷನು ಕೊಲ್ಲುವುದಿಲ್ಲ" ಎಂದನು.

ಭೀಮನು ಅಪಹಾಸ್ಯಕ್ಕೆ ಗುರಿಯಾಗಿ ತಲೆತಗ್ಗಿಸಲು ಕೃಷ್ಣನು ತನ್ನ ತೊಡೆಯನ್ನು ತಟ್ಟಿ ಅವನಿಗೆ ಸಂಜ್ಞೆಯನ್ನು ಮಾಡಿದನು.

ಆಮೇಲೆ ಕೃಷ್ಣನ ಸಂಜ್ಞೆಯಿಂದ ಭೀಮನು ಹುರುಪುಗೊಂಡವನಂತೆ ಹುಬ್ಬುಗಳನ್ನು ಹುರಿಮಾಡಿ, ಹಣೆಯ ಬೆವರನ್ನು ಕೈಯಿಂದ ಒರಸಿಕೊಂಡು, ತನ್ನ 'ಚಿತ್ರಾಂಗದಾ' ಹೆಸರಿನ ಗದಾದಂಡವನ್ನು ಹೆಗಲಿಗೇರಿಸಿಕೊಂಡು ಸಿಂಹದಂತೆ ತನ್ನ ಕೆಂಗಣ್ಣನ್ನು ತಿರುಗಿಸುತ್ತಿದ್ದನು. ಮಗನ ದೈನ್ಯವನ್ನು ನೋಡಿ ವಾಯುದೇವನು ಮರುಗಿ ಭೀಮನಿಗೆ ಹೆಚ್ಚು ಬಲವನ್ನು ಕೊಟ್ಟನೋ ಎಂಬಂತೆ ಭೀಮನು ಚೇತರಿಸಿಕೊಂಡು ಗರ್ಜಿಸುತ್ತ ಮೇಲೆದ್ದನು.

ಮತ್ತೆ ಗದಾಯುದ್ಧವು ಮೊದಲಾಯಿತು. ಭೀಮನು ಅಂಗೈಯನ್ನು ನೆಲಕ್ಕುಜ್ಜಿ ಬಾಹುಗಳನ್ನು ಅಪ್ಪಳಿಸಿ ಹಲ್ಲುಮುಡಿಯನ್ನು ಕಚ್ಚಿ ಕ್ರೋಧದಿಂದ ಗರ್ಜಿಸುತ್ತ ದುರ್ಯೋಧನನ ಮೇಲೆ ಬಿದ್ದನು.

ಆಮೇಲೆ ಶೌರ್ಯದ ಸೊಕ್ಕಿನಿಂದ ಧರ್ಮವನ್ನು ಕಡೆಗಣಿಸಿ ಯುದ್ಧದ ನಿಯಮವನ್ನು ಮೀರಿ ಭೀಮನು ಕೃಷ್ಣನ ಸನ್ನೆಯಂತೆ ದುರ್ಯೋಧನನ ತೊಡೆಗೆ ಗದೆಯಿಂದ ಹೊಡೆದನು. ಕುರುಪತಿಯ ತೊಡೆಯು ಮುರಿದುಹೋಯಿತು. ತೊಡೆಯಿಂದ ರಕ್ತ ಸುರಿಯುತ್ತಿರಲು ಅವನು ಕೆಳಕ್ಕೆ ಬಿದ್ದನು. ಭೀಮನ ಊರುಭಂಗ ಪ್ರತಿಜ್ಞೆ ನೆರವೇರಿ ಗದಾಯುದ್ಧವು ಕೊನೆಗೊಂಡಿತು.

ವ್ಯಾಸಮಹರ್ಷಿಯು ಅದನ್ನು ನೋಡಲಾರದೆ ಆಕಾಶಕ್ಕೆ ಹಾರಿದನು. ಕುರುರಾಜನ ದೈನ್ಯಾವಸ್ಥೆಯನ್ನು ನೋಡಲಾರದೆ ಬಲರಾಮನು ಕೋಪದಿಂದ ಕಣ್ಣುಮುಚ್ಚಿಕೊಂಡನು. ದ್ವೈಪಾಯನನು ಎಚ್ಚರಿಸಿದುದರಿಂದ ಭೀಮನು ಬೆದರಿ ಕೃಷ್ಣನ ಕೈಯನ್ನು ಹಿಡಿದುಕೊಂಡನು. ಪಾಂಡವರು ಭೀಮನನ್ನು ಕರೆದುಕೊಂಡು ಅಲ್ಲಿ ನಿಲ್ಲದೆ ಭಯದಿಂದ ಹೊರಟುಹೋದರು.

ಬಲರಾಮನು ಕಣ್ಣುಬಿಟ್ಟಾಗ ಭೀಮನು ಓಡುತ್ತಿದ್ದನು. ಬಲರಾಮನು ತನ್ನ

ಕೊರಳಿನ ಹಾರವನ್ನು ಸರಿಪಡಿಸಿಕೊಳ್ಳುತ್ತ ಜೋಲುತ್ತಿದ್ದ ಮೈಮೇಲಿನ ವಸ್ತ್ರವನ್ನು ಮೇಲಕ್ಕೆಳೆದುಕೊಂಡು, ದುರ್ಯೋಧನನ ಸಮೀಪಕ್ಕೆ ಹೋದನು.

ಬಲರಾಮನು ಓಡಿಹೋಗುವ ಪಾಂಡವರನ್ನು ಕುರಿತು "ಎಲೈ ಕ್ಷತ್ರಿಯರೆ, ನಿಲ್ಲಿ. ಇದು ಸರಿಯಲ್ಲ. ಶತ್ರುಗಳಿಗೆ ಯಮಸ್ವರೂಪವಾದ ನನ್ನ ನೇಗಿಲನ್ನು ನೋಡದೆ ಸಂಧಿಗೊಪ್ಪದ ನನ್ನನ್ನು ಲೆಕ್ಕಿಸದೆ ಅವನು ದುರ್ಯೋಧನನ ತೊಡೆಯನ್ನು ಮುರಿದಿದ್ದಾನೆ" ಎಂದು ಕೂಗಿ ಹೇಳಿದನು.

ಆಮೇಲೆ "ಅಪ್ಪಾ, ದುರ್ಯೋಧನ, ಒಂದು ಗಳಿಗೆಯವರೆಗೆ ತಾಳ್ಮೆಯಿಂದಿರು. ಈ ನನ್ನ ನೇಗಿಲಿನಿಂದ ರಕ್ತ ಜಿವರುಗಳಿಂದ ನೆನೆದು ಹದವಾಗಿರುವ ಆ ಭೀಮನ ಎದೆಯನ್ನು ಹೊಲವನ್ನುಳುವಂತೆ ಕಿತ್ತು ಉಳುತ್ತೇನೆ" ಎಂದು ಕುಪಿತನಾಗಿ ಹೇಳಿ ಅವನು ಅಲ್ಲಿಂದ ಪಾಂಡವರ ಶಿಬಿರದತ್ತ ಹೊರಟನು.

ದುರ್ಯೋಧನನು ತನ್ನ ನೋವನ್ನು ಲೆಕ್ಕಿಸದೆ, ಮೇಲೇಳಲಾರದೆ ತೆವಳುತ್ತಾ ಬಲದೇವನನ್ನು ಅನುಸರಿಸಿದನು. ಅವನ ಮೈ ಬಿಸಿ ನೆತ್ತರಿನಿಂದ ನೆನೆದಾ ಯುದ್ಧ ಚಂದನವನ್ನು ಬಳಿದುಕೊಂಡಂತೆ ಕಾಣುತ್ತಿತ್ತು. ತೊಡೆಯುಡಿದು ಹುಡಿಯಲ್ಲಿ ಹೊರಳಾಡಿದ ಅವನ ಅಂಗವು ಮಕ್ಕಳ ಮಣ್ಣಾಟವನ್ನು ನೆನಪಿಗೆ ತರುತ್ತಿತ್ತು. ಸಮುದ್ರ ಮಥನವಾದ ಮೇಲೆ ಬಹು ಬಳಲಿಕೆಯಿಂದ ವಾಸುಕಿಯು ತನ್ನ ಹೆಡೆಗಳನ್ನು ಎಳೆದುಕೊಂಡು ಹೋಗುವಂತೆ ತನ್ನ ದೇಹವನ್ನು ಕಷ್ಟದಿಂದ ಎಳೆದುಕೊಂಡು ದುರ್ಯೋಧನನು ಬಲರಾಮನನ್ನು ಅನುಸರಿಸಿ ಅವನ ಸಮೀಪಕ್ಕೆ ಹೋದನು.

"ಯುದ್ಧದ ನಿಯಮವನ್ನು ಮೀರಿ ಭೀಮನು ಹೊಡೆದುದರಿಂದ ನನ್ನ ತೊಡೆ ಮುರಿಯಿತು. ಅರೆಜೀವವಾಗಿರುವ ಈ ನನ್ನ ದೇಹವನ್ನು ತೋಳ್ಬಲದಿಂದ ಎಳೆದುಕೊಂಡು ನಡೆಯುತ್ತಿದ್ದೇನೆ. ಪೂಜ್ಯರೆ, ಇನ್ನು ಶಾಂತರಾಗಬೇಕು, ಕೋಪವನ್ನು ಬಿಡಬೇಕು. ಇಲ್ಲಿಗೆ ನಮ್ಮ ಹಗೆತನ ಮುಗಿಯಿತು. ಯುದ್ಧದ ಕಥೆ ಕೊನೆಗೊಂಡಿತು. ನನ್ನ ಕಥೆಯೂ ಮುಗಿಯಿತು. ಇನ್ನು ಪಾಂಡವರು ಬದುಕಲಿ" ಎಂದು ದೈನ್ಯದಿಂದ ಬೇಡಿದನು.

ಬಲರಾಮನಿಗೆ ಸಮಾಧಾನವಾಗಲಿಲ್ಲ. ಅವನು "ಸುಯೋಧನ, ಒಂದು ಗಳಿಗೆ ಸುಮ್ಮನಿರು. ನನ್ನ ನೇಗಿಲಿನಿಂದ ಪಾಂಡವರ ಮೈಯನ್ನು ಸೀಳಿ ಒನಕೆಯಿಂದ ಅವರ ಭುಜ ಎದೆಗಳನ್ನು ನುಚ್ಚುನುರಿ ಮಾಡಿ ಕೊಂದು ಸ್ವರ್ಗದಲ್ಲಿ ನಿನ್ನ ಸೇವಕರಾಗಲು ಅವರನ್ನು ಕಳಿಸುತ್ತೇನೆ" ಎಂದನು.

"ಬಲದೇವ ಹಾಗೆನ್ನಬೇಡಿ. ಭೀಮನು ತನ್ನ ಪ್ರತಿಜ್ಞೆಯನ್ನು ನೆರವೇರಿಸಿದನು. ನನ್ನ ತಮ್ಮಂದಿರೂ ಗತಿಸಿದರು. ನನ್ನ ಪಾಡು ಹೀಗಾಯಿತು. ಇನ್ನು ಯುದ್ಧದಿಂದ ಪ್ರಯೋಜನವೇನು ?" ದುರ್ಯೋಧನನು ವಿರಕ್ತಿಯಿಂದ ಹೇಳಿದನು. ಅವನ ದಾಯಾದಿ ಮಾತ್ಸರ್ಯ ಕರಗಿಹೋಯಿತು. ತನ್ನೊಂದಿಗೇ ಪಾಂಡವರ ಮೇಲಿನ ವೈರ ಮತ್ತು ಯುದ್ಧವು ಮುಗಿಯಲೆಂದು ಅವನು ಹಂಬಲಿಸಿದನು.

ಅವರ ಬಲರಾಮನು ತನ್ನೆದುರಿನಲ್ಲೇ ತನ್ನ ಪ್ರಿಯ ಶಿಷ್ಯನನ್ನು ಪಾಂಡವರು ವಂಚಿಸಿದರೆಂದು ಕೋಪಗೊಂಡಿದ್ದನು. ಪಾಂಡವರ ಅಧರ್ಮವನ್ನು ಕಣ್ಣಾರೆ ನೋಡಿ ಅವನು ಕಿಡಿಕಿಡಿಯಾಗಿದ್ದನು. ಆದ್ದರಿಂದ ಅವನು ಪಾಂಡವರ ಆ ಅಧರ್ಮಕ್ಕೆ ತಕ್ಕ ಮದ್ದರೆಯುವ ಉತ್ಸಾಹದಿಂದಿದ್ದನು.

ಮಹಾನುಭಾವನಾದ ದುರ್ಯೋಧನನಿಗೆ ತಾನು ವಂಚಿತನಾದೆನೆಂಬ ಕೋಪವಿರಲಿಲ್ಲ. ತಾನು ಪ್ರತಿಕೂಲ ದೈವನೆಂದು ಅವನಿಗೆ ಅರಿವಾಗಿತ್ತು. ತನ್ನ ಪ್ರಾಣಕ್ಕೆ ತಕ್ಕ ಬೆಲೆ ಸಿಕ್ಕಿದೆಯೆಂದು ಅವನ ಎಣಿಕೆ.

"ಪೂಜ್ಯರೆ, ನಾನು ಭೀಮನಿಗೆ ಸೋತೆನೆಂದು ಭಾವಿಸಿದಿರಾ ? ಅವನಿಗೆ ನಾನು ಛಲದಲ್ಲಿ ಸೋಲಲಿಲ್ಲ. ಸೋಲುವವನೂ ಅಲ್ಲ" ದುರ್ಯೋಧನನು ಬಲರಾಮನಿಗೆ ಹೇಳಿದನು.

ಬಲರಾಮನು ಭೀಮನ ವಂಚನೆಯಿಂದ ಅವನಿಗೆ ಆ ಸ್ಥಿತಿಯಾಯಿತೆನ್ನಲು ದುರ್ಯೋಧನನು "ನನ್ನನ್ನು ಭೀಮನು ವಂಚಿಸಲಿಲ್ಲ. ಸರ್ವಲೋಕಪ್ರಿಯನಾದ ವಿಷ್ಣುವು ಭೀಮನ ಗದೆಯಲ್ಲಿ ಸೇರಿಕೊಂಡು ನನ್ನನ್ನು ಕೊಂದನು" ಎಂದನು. ಕೃಷ್ಣನು ವಿಷ್ಣುವಿನ ಅವತಾರವೆಂದೂ ಅವನ ಇಚ್ಛಾನುಸಾರ ಅಷ್ಟೆಲ್ಲ ನಡೆಯಿತೆಂದೂ ಅವನಿಗೆ ತಿಳಿದಿತ್ತು.

ಗಾಂಧಾರಿ ಧೃತರಾಷ್ಟ್ರರಿಗೆ ಕುರುರಾಜನ ಸೋಲು ತಿಳಿದು ಅವರು ಮಗನನ್ನು ಹುಡುಕಿಕೊಂಡು ಯುದ್ಧಭೂಮಿಗೆ ಮೊಮ್ಮಗ ಮತ್ತು ಸೊಸೆಯರೊಡನೆ ಬರುತ್ತಿದ್ದರು. ದುರ್ಯೋಧನನ ಮಗ ದುರ್ಜಯನು ಆ ಯುದ್ಧಭೂಮಿಯಲ್ಲಿ ದಾರಿ ತೋರುತ್ತಾ ಅವರನ್ನು ಕರೆದುಕೊಂಡು ಬರುತ್ತಿದ್ದನು.

ಗಾಂಧಾರಿ ಧೃತರಾಷ್ಟ್ರರು ಪುತ್ರಶೋಕದಿಂದ ಜರ್ಜರಿತ ಶರೀರರಾಗಿ "ಅಪ್ಪಾ, ಮಗು, ಎಲ್ಲಿರುವೆ ?" ಎಂದು ದುರ್ಯೋಧನನನ್ನು ಬಾರಿಬಾರಿಗೂ ಕರೆಯುತ್ತಿದ್ದರು. ಯುದ್ಧದಲ್ಲಿ ಮಗನು ವಂಚಿತನಾಗಿ ಶತ್ರುವಿಗೆ ಆಹುತಿಯಾದನೆಂದು

ಇದನ್ನು ಕೇಳಿ ತನ್ನ ಕುರುಡು ದ್ವಿಗುಣಿಸಿತೆಂದು ಧೃತರಾಷ್ಟ್ರನು ಹಲುಬಿದನು. ಅಪತ್ಯಹೀನಳಾದ ತಾನಿನ್ನೂ ಜೀವಿಸಿರುವೆನೆಂದು ಗಾಂಧಾರಿಯು ಕೊರಗಿದಳು.

ದುರ್ಯೋಧನನು ಮುಡಿಗೆದರಿ ದುಃಖಿಸುತ್ತಾ ಬರುವ ತನ್ನ ರಾಣಿಯರನ್ನು ದೂರದಿಂದಲೇ ನೋಡಿ "ಅಯ್ಯೋ, ಗದೆಯ ಏಟಿನ ನೋವು ನನಗೆ ಆಗ ಕಾಣಿಸಲಿಲ್ಲ. ಈಗ ಆಗುತ್ತಿದೆ" ಎಂದು ನೊಂದುಕೊಂಡನು.

ಎಲ್ಲಿಯೂ ಕಾಣಿಸದ ಮಗನನ್ನು ಹುಡುಕುತ್ತ "ಮಕ್ಕಳೇ ನನ್ನನ್ನು ಹುಡುಕಿಕೊಂಡು ಬರಬೇಕಾದ ಈ ಮುಪ್ಪಿನಲ್ಲಿ ನಾನೇ ಹುಡುಕಬೇಕಾಯಿತೆ! ವೀರರಾದ ನೂರು ಮಂದಿ ಮಕ್ಕಳು ಕೈಯೆತ್ತಿ ಕೊಡುವ ತರ್ಪಣ ಜಲವನ್ನು ಪಡೆಯುವ ಭಾಗ್ಯ ನನಗಿಲ್ಲವಾಯಿತೆ?" ಎಂದು ಧೃತರಾಷ್ಟ್ರನು ಕಂಬನಿದುಂಬಿದನು.

ಗಾಂಧಾರಿಯು ಅಳುತ್ತ ಮಗನ ಹೆಸರನ್ನು ಹಿಡಿದು ಕರೆದಳು. ಆ ಮಾತಾಪಿತೃಗಳ ಪುತ್ರಶೋಕವನ್ನು ಬಲರಾಮನು ನೋಡಿ ಸಂಕಟಪಟ್ಟನು.

"ಮಗೂ ದುರ್ಯೋಧನ, ಮಾತನಾಡು ಬಾ. ನನಗೆ ನಮಸ್ಕರಿಸು" ಧೃತರಾಷ್ಟ್ರನು ಕೂಗಿದನು.

ಭೂಮಿಯಲ್ಲಿ ಬಿದ್ದಿದ್ದ ದುರ್ಯೋಧನನು ತಂದೆಗೆ ನಮಸ್ಕರಿಸಬೇಕೆಂದು ಮೇಲೇಳಲು ಪ್ರಯತ್ನಿಸಿ ಏಳಲಾಗದೆ ಕೆಳಕ್ಕೆ ಕುಸಿದುಬಿದ್ದು "ಅಯ್ಯೋ, ತಂದೆಗೆ ವಂದಿಸುವ ಶಕ್ತಿಯೂ ನನಗೆ ಇಲ್ಲವಾಯಿತೆ!" ಎಂದು ಅವನು ದುಃಖಿಸಿದನು.

ದುರ್ಯೋಧನನ ಪತ್ನಿಯರು ಗಾಂಧಾರಿಯ ಮಾತಿನಂತೆ ತಮ್ಮ ಪತಿಯನ್ನು ಹುಡುಕತೊಡಗಿದರು. ತಾತನ ಬಟ್ಟೆಯ ಸೆರಗನ್ನು ಹಿಡಿದು ದಾರಿ ತೋರುತ್ತಾ ಹೋಗುತ್ತಿದ್ದ ದುರ್ಜಯನು ತನಗೆ ದಣಿವಾಗುವುದೆಂದು ತಾತನಿಗೆ ಹೇಳಿದನು. ಧೃತರಾಷ್ಟ್ರನು "ಮಗೂ, ನಿನ್ನ ತಂದೆಯ ತೊಡೆಯ ಮೇಲೆ ಹೋಗಿ ಕುಳಿತುಕೊ" ಎಂದು ಸಮಾಧಾನ ಹೇಳಿದನು.

ದುರ್ಜಯನು ತನ್ನ ತಂದೆಯನ್ನು ಕರೆಯುತ್ತಾ ಮುಂದೆ ಹೋದನು.

ತನ್ನನ್ನು "ಅಪ್ಪ, ಎಲ್ಲಿರುವೆ?" ಎಂದು ಕರೆಯುತ್ತಾ ಬರುವ ದುರ್ಜಯನನ್ನು ನೋಡಿ ಪುತ್ರವಾತ್ಸಲ್ಯದಿಂದ ದುರ್ಯೋಧನನ ಹೊಟ್ಟೆಯಲ್ಲಿ ಸಂಕಟವಾಯಿತು. "ನನ್ನ ತೊಡೆಯಲ್ಲಿ ಮಲಗಲು ತಕ್ಕವನಾದ ಈ ಕೂಸು ನನ್ನ ಈ ಅವಸ್ಥೆಯನ್ನು ಕಂಡು ಏನೆನ್ನುವನೋ!" ಎಂದು ಅವನು ಮರುಗಿದನು.

ಎಲ್ಲೆಲ್ಲಿ ಹುಡುಕುತ್ತಾ ಬರುತ್ತಿದ್ದ ದುರ್ಜಯನು ನೆಲದ ಮೇಲೆ ಕುಳಿತಿದ್ದ

ದುರ್ಯೋಧನನನ್ನು ಕಂಡು ಹತ್ತಿರಕ್ಕೆ ಓಡಿಹೋದನು. ದುರ್ಯೋಧನನು ಅವನನ್ನು ಇಲ್ಲಿಗೇಕೆ ಬಂದೆಯೆಂದು ಕೇಳಲು ದುರ್ಜಯನು "ಅಪ್ಪಾ, ನೀನು ಏಕೆ ಹೊತ್ತು ಮಾಡಿದೆ? ನಿನ್ನ ತೊಡೆಯಮೇಲೆ ಕೂತುಕೊಳ್ಳುತ್ತೇನೆ" ಎಂದು ಅವನ ತೊಡೆಯಮೇಲೆ ಕುಳಿತುಕೊಳ್ಳಲು ಹೋದನು. ದುರ್ಯೋಧನನು ಮಗನನ್ನು ತಡೆದನು.

ಅವನು "ಏಕೆ ತಡೆಯುವೆಯಪ್ಪಾ?" ಎಂದು ಪ್ರಶ್ನಿಸಿದನು.

ದುರ್ಯೋಧನನು "ಮಗೂ, ಇನ್ನು ಮುಂದೆ ನನ್ನ ತೊಡೆಯ ಮೇಲೆ ನೀನು ಕೂರಲಾರೆ. ಅದು ಎಲ್ಲಿ ದೊರೆಯುವುದೊ ಅಲ್ಲಿ ಕುಳಿತುಕೊ" ಎಂದು ಸಂಕಟದಿಂದ ನಿಟ್ಟುಸಿರಿಟ್ಟನು. ದುರ್ಜಯನಿಗೆ ಅದು ಗೊತ್ತಾಗಲಿಲ್ಲ.

"ಅಪ್ಪಾ, ಹಾಗಾದರೆ ನೀನೆಲ್ಲಿಗೆ ಹೋಗುತ್ತೀಯೆ? ಮುಗ್ಧ ದುರ್ಜಯನು ಪ್ರಶ್ನಿಸಿದನು.

"ನನ್ನ ನೂರು ಮಂದಿ ತಮ್ಮಂದಿರು ಹೋದಲ್ಲಿಗೆ ಹೋಗುತ್ತೇನೆ" ದುರ್ಯೋಧನನು ಉತ್ತರ ಹೇಳಿದನು.

"ಹಾಗಾದರೆ ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗು" ಅವನು ಆಸೆಯಿಂದ ಕೇಳಿದನು.

"ಹೋಗಿ ಭೀಮನನ್ನು ಕೇಳು, ಮಗು" ದುರ್ಯೋಧನನು ಗದ್ಗದಿಸುತ್ತ ಹೇಳಿದನು. ಮಾತಾಡುತ್ತಿದ್ದಂತೆ ಶೋಕದಿಂದ ಅವನ ತುಟಿ ನಡುಗಿತು.

"ನಿನ್ನನ್ನು ಅಜ್ಜಿ, ಅಮ್ಮ ಎಲ್ಲರೂ ಹುಡುಕುತ್ತಿದ್ದಾರೆ. ಬಾರಪ್ಪ ಹೋಗೋಣ" ದುರ್ಜಯನು ಕರೆದನು. ದುರ್ಯೋಧನನು ತಾನು ಬರಲಾರೆನೆಂದನು.

ದುರ್ಜಯನು ಸುಮ್ಮನಾಗಲಿಲ್ಲ. "ಅಪ್ಪಾ, ನಾನು ನಿನ್ನನ್ನು ಎತ್ತಿಕೊಂಡು ಹೋಗುತ್ತೇನೆ" ಎಂದನು.

ದುರ್ಯೋಧನನು ಅವನಿನ್ನೂ ಚಿಕ್ಕವನೆಂದು ಹೇಳಲು ದುರ್ಜಯನು ಅಲ್ಲಿಂದ ಮುಂದೆ ಹೋಗಿ ಮಹಾರಾಜನು ಅಲ್ಲಿರುವನೆಂದು ಅಜ್ಜಿ ಅಜ್ಜರಿಗೆ ತಿಳಿಸಿದನು.

ಮೇಲೇಳಲಾರದೆ ಹುಡಿಯಲ್ಲಿ ಮಗ ಕುಳಿತಿರುವನೆಂಬುದನ್ನು ಕೇಳಿ ಧೃತರಾಷ್ಟ್ರನ ಶೋಕದ ಕಟ್ಟೊಡೆಯಿತು. ಅಳುವ ತಾಯಿತಂದೆಯರನ್ನು ದುರ್ಯೋಧನನು ಸಂತೈಸಿದನು.

"ಅಯ್ಯೋ, ಹೇಗೆ ಸಮಾಧಾನದಿಂದಿರಲಿ? ನೂರು ಮಂದಿ ಮಕ್ಕಳಲ್ಲಿ ನೀನೊಬ್ಬನು ಉಳಿದಿದ್ದೀಯೆ. ಈಗ ನೀನೂ ಗತಿಸಿದರೆ ನಾನು ಹೇಗೆ ಬಾಳಲಿ?" ಎಂದು ಕಣ್ಣೀರು ಸುರಿಸುತ್ತ ಧೃತರಾಷ್ಟ್ರನು ಕೆಳಕ್ಕೆ ಕುಸಿದು ಬಿದ್ದನು.

ದುರ್ಯೋಧನನು "ಅಪ್ಪಾ, ಶೋಕಿಸಬೇಡ. ನಾನು ಶತ್ರುವಿಗೆ ಬೆನ್ನು ತೋರಿಸದೆ ಯುದ್ಧಮಾಡಿ ಬಿದ್ದಿದ್ದೇನೆ. ನಿಮ್ಮ ಪಾದಕ್ಕೆ ನಮಸ್ಕರಿಸಿದ ಈ ನನ್ನ ಶಿರವನ್ನು ಅನ್ಯರಿಗೂ ಬಾಗಿಸದೆ ಇದುವರೆಗೆ ಮಾನದಿಂದ ಬದುಕಿದೆ. ಮಾನವನ್ನು ಒಡಗೊಂಡು ಹುಟ್ಟಿದೆ. ಈಗ ಅದರ ಜೊತೆಯಲ್ಲೇ ಸ್ವರ್ಗಕ್ಕೆ ಹೋಗುತ್ತೇನೆ" ಎಂದು ಸಮಾಧಾನಪಡಿಸಿದನು.

ಇದರಿಂದ ಧೃತರಾಷ್ಟ್ರನ ಶೋಕ ಇಮ್ಮಡಿಸಿತು. "ಅಯ್ಯೋ! ಹುಟ್ಟುವಾಗಲೇ ನಾನು ಕುರುಡನಾಗಿ ಹುಟ್ಟಿದೆ. ಈಗ ವೃದ್ಧಾಪ್ಯವೂ ಹೆಚ್ಚಿತು. ಬದುಕಿನಲ್ಲಿ ನನಗೆ ಯಾವ ಆಸೆಯೂ ಇಲ್ಲ. ಪುತ್ರಶೋಕ ನನ್ನ ಎದೆಯನ್ನು ಹಿಂಡುತ್ತಿದೆ" ಎಂದು ಗೋಳಾಡಿದನು. ಅದುವರೆಗೆ ಅವರ ಮಾತನ್ನು ಕೇಳುತ್ತ ಅಲ್ಲೇ ನಿಂತಿದ್ದ ಬಲರಾಮನಿಗೆ ತನ್ನ ಮುಖವನ್ನು ಧೃತರಾಷ್ಟ್ರನಿಗೆ ತೋರಿಸಲು ಬಲು ಸಂಕಟವಾಯಿತು.

ದುರ್ಯೋಧನನು ಗಾಂಧಾರಿಯನ್ನು ಕುರಿತು "ಅಮ್ಮ, ನಿನಗೆ ನಮಸ್ಕರಿಸಿ ಬೇಡುತ್ತೇನೆ. ನಾನು ಪುಣ್ಯವನ್ನು ಮಾಡಿದ್ದರೆ ಜನ್ಮಜನ್ಮಕ್ಕೂ ನೀನೇ ನನ್ನ ತಾಯಿಯಾಗು" ಎಂದು ಕೂತುಕೊಂಡೇ ನಮಸ್ಕರಿಸಿದನು.

ಆಮೇಲೆ ಬಿಕ್ಕಿ ಬಿಕ್ಕಿ ಅಳುವ ತನ್ನ ರಾಣಿ ಮಾಲವಿಯನ್ನು ಕುರಿತು "ನಿನ್ನ ಪತಿ ಬೆನ್ನುಕೊಟ್ಟದೆ ಶತ್ರುಗಳೊಡನೆ ಕಾದಾಡಿ ಮಡಿದನು. ಆದ್ದರಿಂದ ಕ್ಷತ್ರಿಯ ರಮಣಿಯಾದ ನೀನು ಏಕೆ ಅಳುವೆ?" ಎಂದು ದುರ್ಯೋಧನನು ಸಂತೈಸಿದನು.

ಪೌರವಿಯೆಂಬ ಅರಸಿಯನ್ನು ಕುರಿತು "ನಾನು ಶಾಸ್ತ್ರೋಕ್ತವಾಗಿ ಅನೇಕ ಯಾಗಗಳನ್ನು ಮಾಡಿದೆ. ನೆಂಟರಿಷ್ಟರನ್ನು ಸಲಹಿದೆ. ಆಶ್ರಿತ ಜನರ ಅಪೇಕ್ಷೆಗಳನ್ನೆಲ್ಲ ನೆರವೇರಿಸಿದೆ. ಯುದ್ಧದಲ್ಲಿ ಕ್ಷತ್ರಿಯ ರಾಜರನ್ನೆಲ್ಲಾ ನನ್ನ ಪರಾಕ್ರಮದಿಂದ ನಡುಗಿಸಿದೆ. ನನ್ನಂತಹ ಮಾನವಂತನನ್ನು ಕೂಡಿದ ವೀರಸ್ತ್ರೀಯಾದ ನೀನು ಹೀಗೆ ಅಳುವುದೆ? ಸಂತೈಸಿಕೊ" ಎಂದು ಸಮಾಧಾನಪಡಿಸಿದನು.

ಅನಂತರ ಅವನು ದುರ್ಜಯನನ್ನು ಕೈಹಿಡಿದು ತನ್ನ ಬಳಿಯಲ್ಲಿ ಕೂರಿಸಿಕೊಂಡು "ಪಾಂಡವರನ್ನು ನನ್ನಂತೆಯೇ ಭಾವಿಸಿಕೊಂಡು ಅವರ ಸೇವೆಯನ್ನು ಮಾಡು. ಕುಂತೀಮಾತೆಯ ಆಜ್ಞೆಯನ್ನು ಪಾಲಿಸು. ದ್ರೌಪದಿ ಸುಭದ್ರೆಯರನ್ನು ತಾಯಿ

ಯಂತೆ ಪ್ರಾಜಿಸು. ಅಭಿಮಾನಧನನಾದ ದುರ್ಯೋಧನನು ಸಮಬಲನೊಡನೆ ಯುದ್ಧ ಮಾಡಿ ಗತಿಸಿದನೆಂದು ತಿಳಿದುಕೊಂಡು ನೀನು ದುಃಖವನ್ನು ಬಿಡು. ನನಗೆ ಪಾಂಡವರು ತರ್ಪಣ ಕೊಡುವಾಗ ನೀನು ಧರ್ಮರಾಯನ ಜೊತೆಯಲ್ಲಿ ಕುಳಿತು ನನಗೆ ತರ್ಪಣ ಕೊಡು" ಎಂದು ತನ್ನ ಕೊನೆಯ ಸಂದೇಶವನ್ನು ಹೇಳಿದನು.

ಕಡೆಗಾಲ ಸನ್ನಿಹಿತವಾದಂತೆ ದುರ್ಯೋಧನನ ಮನಸ್ಸು ಪಶ್ಚಾತ್ತಾಪಪಡ ತೊಡಗಿತು.

ದುರ್ಯೋಧನನ ಸೋಲೂ ಅವನಿಗೆ ಪಾಂಡವರು ಮಾಡಿದ ಮೋಸವೂ ಅಶ್ವತ್ಥಾಮನಿಗೆ ತಿಳಿಯಿತು. ಅವನು ಪ್ರಳಯಾಗ್ನಿಯಂತೆ ಮೊರೆಯುತ್ತಾ, ಕುರುಕ್ಷೇತ್ರದ ಮೌನವನ್ನು ಕಲಕುತ್ತಾ, ತನ್ನ ಸ್ವಾಮಿಯನ್ನು ಹುಡುಕಿಕೊಂಡು ಬಂದನು. ಉಗ್ರಾಸ್ತ್ರವೊಂದನ್ನು ರಭಸದಿಂದ ಎಳೆಯುತ್ತಾ ದೇಹದಲ್ಲಿ ಕಾಡ್ಗಿಚ್ಚನ್ನೂ ತಲೆಯಲ್ಲಿ ಮಳೆಬಿಲ್ಲನ್ನೂ ಧರಿಸಿದ ಮೇರುಪರ್ವತದಂತೆ ಅವನು ಶೋಭಿಸುತ್ತಿದ್ದನು.

ಅವನು ದುರ್ಯೋಧನನ ಕಡೆ ವೇಗವಾಗಿ ಬರುತ್ತಾ "ಕ್ಷತ್ರಿಯರೇ, ಕಿವಿಗೊಟ್ಟು ಕೇಳಿ. ನಾನು ದ್ರೋಣನ ಮಗ ಅಶ್ವತ್ಥಾಮ. ತೊಡೆ ಮುರಿದು ಬಿದ್ದಿರುವ ಕೌರವನಲ್ಲ ಇದೋ, ನಾನು ಶಸ್ತ್ರಸನ್ನದ್ಧನಾಗಿ ಯುದ್ಧಭೂಮಿಗೆ ಬಂದಿದ್ದೇನೆ. ನಾನೊಬ್ಬನೇ ಯುದ್ಧ ಮಾಡುತ್ತೇನೆ. ನಾನೊಬ್ಬನೇ ಜಯವನ್ನು ಸಾಧಿಸುತ್ತೇನೆ" ಎಂದು ಕೂಗುತ್ತ ಮುಂದೆ ಬಂದು "ನಾನು ತಂದೆಗೆ ತರ್ಪಣ ಕೊಡುತ್ತಿದ್ದ ಸಮಯದಲ್ಲಿಯೇ ಕೌರವನು ವಂಚಿತನಾದನು. ಇಷ್ಟೊಂದು ಸೈನ್ಯವಿದ್ದೂ ತಾನೇ ಅತಿರಥನಾಗಿದ್ದೂ ದುರ್ಯೋಧನನು ಕಾಲವಶದಿಂದ ಸೋತನು" ಎಂದು ವಿಷಾದಪಡುತ್ತ ಕೌರವನ ಬಳಿಗೆ ಬಂದನು.

ಅಶ್ವತ್ಥಾಮನು ದುರ್ಯೋಧನನ ಅವಸ್ಥೆಯನ್ನು ನೋಡಿ "ಕುರುರಾಜ, ನಿನ್ನ ಸೋಲಿಗೆ ಕಾರಣರಾದವರನ್ನು ಕೊಲ್ಲುತ್ತೇನೆ. ಪಾಂಡವರನ್ನು ಕಾಪಾಡಲು ಆಯುಧಗಳನ್ನು ಹಿಡಿದುಕೊಂಡು ಕೃಷ್ಣನೇ ಬಂದರೂ ಪಾಂಡವರನ್ನು ನಾನು ಕೊಲ್ಲುತ್ತೇನೆ, ಅವರ ವಂಶವನ್ನೇ ನಿರ್ಮೂಲ ಮಾಡುತ್ತೇನೆ" ಎಂದು ಆರ್ಭಟಿಸಿದನು.

ಹಗೆಯನ್ನು ಮರೆತು, ಶಾಂತಚಿತ್ತನಾದ ದುರ್ಯೋಧನನು "ಯುದ್ಧದಲ್ಲಿ ರಾಜರೆಲ್ಲ ಮಡಿದರು. ಕರ್ಣ, ಭೀಷ್ಮ ಮತ್ತು ನನ್ನ ತಮ್ಮಂದಿರೆಲ್ಲಾ ಮಡಿದರು.

ನನಗೆ ಈ ಸ್ಥಿತಿ ಬಂತು. ನೀನು ಇನ್ನು ಮುಂದೆ ಬಿಲ್ಲನ್ನು ಹಿಡಿಯಬೇಡ" ಎಂದು ಸಮಾಧಾನಮಾಡಿದನು.

"ಏನು ! ಭೀಮನು ನಿನ್ನ ತೊಡೆಯನ್ನು ಮುರಿದಾಗಲೆ ನಿನ್ನ ದರ್ಪವನ್ನೂ ಮುರಿದನೆ ?" ಅಶ್ವತ್ಥಾಮನು ಕೋಪದಿಂದ ವ್ಯಂಗ್ಯವಾಗಿ ಕೇಳಿದನು.

"ಹಾಗಲ್ಲ, ರಾಜರಿಗೆ ಮಾನವೇ ಪ್ರಾಣ. ನಾನು ಮಾನಕ್ಕಾಗಿಯೇ ಇಷ್ಟೆಲ್ಲಾ ಮಾಡಿದೆ. ನಾನು ಮಾಡಿದ ಅಕಾರ್ಯಗಳನ್ನು ನೆನೆದುಕೊ. ದ್ರೌಪದಿಯ ಮಾನಭಂಗ, ಪಾಂಡವರನ್ನು ಕಾಡಿಗಟ್ಟಿದುದು, ಅಲ್ಲಿ ಅವರು ಮೃಗಗಳಂತೆ ಬದುಕಿದುದು. ಅನಂತರ ಅಭಿಮನ್ಯುವನ್ನು ಕೊಂದುದನ್ನು ಸ್ಮರಿಸಿಕೊ. ಇವುಗಳೊಡನೆ ಹೋಲಿಸಿದರೆ ಅವರು ನನಗೆ ಮಾಡಿದುದು ಅತ್ಯಲ್ಪವೆನಿಸುತ್ತದೆ. ಆದ್ದರಿಂದ ಗುರುಪುತ್ರ ಅವರನ್ನು ಮನ್ನಿಸಿಬಿಡು" ಶಾಂತ ಚಿತ್ತದಿಂದಲೇ ನುಡಿದನು.

"ಏನೇ ಆಗಲಿ ನಾನು ಪ್ರತಿಜ್ಞೆ ಮಾಡಿಬಿಟ್ಟೆ. ನಿನ್ನಾಣೆಯಾಗಿ, ನನ್ನಾಣೆಯಾಗಿ, ವೀರಲೋಕಗಳಾಣೆಯಾಗಿ ರಾತ್ರಿ ಯುದ್ಧದಲ್ಲಿ ಪಾಂಡವರನ್ನು ಕೊಲ್ಲುತ್ತೇನೆ"—ಎಂದು ಪ್ರತಿಜ್ಞೆಗೈದನು. ಬಳಿಕ ಅವನು ದುರ್ಜಯನನ್ನು ಹತ್ತಿರಕ್ಕೆ ಕರೆದು "ತಂದೆ ಗಳಿಸಿದ ರಾಜ್ಯದಲ್ಲಿ ವಿಪ್ರವಚನದಿಂದ ನೀನೇ ರಾಜನಾಗು" ಎಂದು ನೇಮಿಸಿದನು.

ಇಷ್ಟರಲ್ಲಿ ದುರ್ಯೋಧನನಿಗೆ ಅವಸಾನ ಕಾಲ ಸನ್ನಿಹಿತವಾಯಿತು. ಉಸಿರು ಜೋರಾಯಿತು. "ಇದೋ ಪೂರ್ವಜರು ಕಾಣಿಸಿಕೊಂಡರು. ಸಹೋದರರು ಕರ್ಣನನ್ನು ಮುಂದಿಟ್ಟುಕೊಂಡು ನಿಂತಿದ್ದಾರೆ. ಅಭಿಮನ್ಯು ಕೋಪದಿಂದ ನೋಡುತ್ತಿದ್ದಾನೆ. ನನ್ನನ್ನು ಕರೆದೊಯ್ಯಲು ಯಮ ವಿಮಾನವನ್ನು ಕಳಿಸಿದ್ದಾನೆ. ಇಗೋ ಬಂದೆ ಬಂದೆ" ಎಂದುಸುರುತ್ತಾ ಮೇಲೆ ನೋಡುತ್ತಾ ಕುಸಿದುಬಿದ್ದನು.

ಧೃತರಾಷ್ಟ್ರನು ಅಂತಃಪುರದ ಸ್ತ್ರೀಯರೊಡನೆ ಬಹು ಪುತ್ರಶೋಕದಿಂದ "ಇನ್ನು ನಾನು ಆಶ್ರಮಕ್ಕೆ ಹೋಗುತ್ತೇನೆ" ಎಂದು ನುಡಿಯುತ್ತಾ ಅಲ್ಲಿಂದ ಹೊರಟನು. ಗುರುಪುತ್ರನು ಪಾಂಡವರನ್ನು ಕೊಲೆಗೈಯ್ಯಲೋಸುಗ ಪಾಳಯದತ್ತ ನಡೆದನು.

---

# ಪ್ರತಿಜ್ಞಾ ಯೌಗಂಧರಾಯಣ

ಪೂರ್ವಕಾಲದಲ್ಲಿ ವತ್ಸದೇಶವನ್ನು ಉದಯನ ರಾಜನು ಆಳುತ್ತಿದ್ದನು. ಅವನು ವೀಣೆ ನುಡಿಸುವುದರಲ್ಲಿ ನಿಪುಣನಾಗಿದ್ದನು. ಘೋಷವತಿ ಎಂಬ ವೀಣೆಯನ್ನು ಬಾರಿಸಿ, ಆನೆಗಳನ್ನು ಮೋಹಗೊಳಿಸಿ, ಅವುಗಳನ್ನು ಹಿಡಿಯುವುದರಲ್ಲಿ ಅವನಿಗೆ ತುಂಬಾ ಆಸಕ್ತಿ. ಆದ್ದರಿಂದ ಅವನು ಹೆಚ್ಚು ಕಾಲವನ್ನು ಬೇಟೆಯಲ್ಲಿಯೂ ವೀಣಾವಾದನದಲ್ಲಿಯೂ ಕಳೆಯುತ್ತಿದ್ದನು. ಅವನಿಗೆ ಸ್ವಾಮಿಭಕ್ತನೂ ಚತುರೋಪಾಯ ಕೋವಿದನೂ ಆದ ಯೌಗಂಧರಾಯಣನೆಂಬ ಪ್ರಧಾನ ಮಂತ್ರಿಯೂ ಮತ್ತು ಪರಾಕ್ರಮಶಾಲಿಯಾದ ರಮಣ್ವಂತನೆಂಬ ಸೇನಾಪತಿಯೂ ಇದ್ದರು. ಅವರಿಬ್ಬರಿಗೆ ಆಡಳಿತವನ್ನು ಒಪ್ಪಿಸಿ ವತ್ಸರಾಜನು ನಿಶ್ಚಿಂತನಾಗಿದ್ದನು.

ಚಂಡಮಹಾಸೇನನೆಂಬುವನು ಉಜ್ಜಯಿನಿಯ ರಾಜನಾಗಿದ್ದನು. ಅವನಿಗೆ ಗೋಪಾಲಕ, ಪಾಲಕ ಎಂಬಿಬ್ಬರು ಗಂಡುಮಕ್ಕಳೂ ವಾಸವದತ್ತೆಯೆಂಬ ಮಗಳೂ ಇದ್ದರು. ಚಂಡಮಹಾಸೇನನು ತನ್ನ ಮಗಳನ್ನು ವತ್ಸ ರಾಜನಿಗೆ ಕೊಡಬೇಕೆಂದು ಯೋಚಿಸಿದ್ದನು. ಆದರೆ ಅವನಿಗೂ ವತ್ಸರಾಜನಿಗೂ ಹಿಂದಿನಿಂದಲೂ ಹಗೆತನವಿತ್ತು. ಹೇಗಾದರೂ ವತ್ಸರಾಜನಿಗೆ ಮಗಳನ್ನು ಮದುವೆ ಮಾಡಿಬಿಟ್ಟರೆ ಒಳ್ಳೆಯ ಅಳಿಯನೂ ಸಿಕ್ಕಿ ಶತ್ರುವೂ ಮಿತ್ರನಾಗುವನೆಂಬುದು ಅವನ ಎಣಿಕೆ. ಆದ್ದರಿಂದ "ಇಲ್ಲಿಗೆ ತಾವು ಬಂದು ವಾಸವದತ್ತೆಯನ್ನು ತಮ್ಮ ಶಿಷ್ಯಳನ್ನಾಗಿ ಸ್ವೀಕರಿಸಿ ಅವಳಿಗೆ ವೀಣೆಯನ್ನು ಕಲಿಸಿಕೊಡಬೇಕು" ಎಂದು ಒಬ್ಬ ದೂತನ ಕೈಯಲ್ಲಿ ವತ್ಸರಾಜನಿಗೆ ಹೇಳಿಕಳಿಸಿದ್ದನು. ತಾನಿರುವಲ್ಲಿಗೆ ಅವಳು ಬಂದರೆ ಕಲಿಸುವುದಾಗಿ ವತ್ಸರಾಜನು ದರ್ಪದಿಂದ ನಿರಾಕರಿಸಿದ್ದನು.

ವತ್ಸರಾಜನ ಬಳಿಗೆ ಮಗಳನ್ನು ಕಳಿಸುವುದು ತನ್ನ ಗೌರವಕ್ಕೆ ಕಡಮೆಯೆಂದು ಭಾವಿಸಿ ಅವನನ್ನು ಬರಮಾಡಿಕೊಳ್ಳುವ ಉಪಾಯವೊಂದನ್ನು ಚಂಡಮಹಾಸೇನನು ಹೂಡಿದನು. ವತ್ಸರಾಜನಿಗೆ ಆನೆಯ ಬೇಟೆಯಲ್ಲಿ ಬಹಳ ಆಸೆಯೆಂಬುವನ್ನು ಅವನು ತಿಳಿದುಕೊಂಡು ಯಂತ್ರದ ಆನೆಯನ್ನೊಂದನ್ನು ಮಾಡಿಸಿ ಅದರೊಳಗೆ ಕೆಲವು ಭಟರನ್ನು ಇರಿಸಿ ಅದನ್ನು ವಿಂಧ್ಯ ಪರ್ವತದ ಕಾಡಿನಲ್ಲಿ ಬಿಡಿಸಿದನು.

ವಿಂಧ್ಯಾಟವಿಗೆ ಹೊಸದಾಗಿ ಬಂದ ಆ ಆನೆಯನ್ನು ಕಂಡ ಕೂಡಲೆ ರಾಜಭಟರು ವತ್ಸರಾಜನಿಗೆ ಆ ವಿಷಯವನ್ನು ಬಿನ್ನವಿಸಿದರು. ರಾಜನು ಆನೆಯನ್ನು ಹಿಡಿಯಬೇಕೆಂದು ಮಿತಪರಿವಾರದೊಡನೆ ಹೊರಟು ಕಾಡಿನಲ್ಲಿ ಬೀಡುಬಿಟ್ಟನು. ಅವನ

ಜೊತೆಯಲ್ಲಿ ರುಮಣ್ವಂತನಿದ್ದನು. ಯೌಗಂಧರಾಯಣನು ರಾಜಧಾನಿಯಲ್ಲೇ ಇರಬೇಕಾಯಿತು. ರಾಜನು ವೀಣೆಯನ್ನು ನುಡಿಸುತ್ತಾ ಆ ಮಾಯಾಗಜವನ್ನು ಮೋಹಗೊಳಿಸಿ ಹಿಡಿಯಲು ಯತ್ನಿಸುತ್ತಿದ್ದನು.

ಚಂಡಮಹಾಸೇನನು ವತ್ಸರಾಜನನ್ನು ಸೆರೆಹಿಡಿಯಲು ಮಾಡಿದ್ದ ಉಪಾಯವನ್ನು ಗೂಢಚಾರರು ಯೌಗಂಧರಾಯಣನಿಗೆ ತಿಳಿಸಿದ್ದರು. ಆದ್ದರಿಂದ ವತ್ಸರಾಜನು ನಾಗವನಕ್ಕೆ ಹೋಗಿ ಶತ್ರುಗಳ ಕೈಗೆ ಸಿಕ್ಕಿಬೀಳುವ ಮೊದಲೇ ಈ ಸುದ್ದಿಯನ್ನು ಪತ್ರದಲ್ಲಿ ಬರೆದು ರಾಜನಿಗೆ ತಿಳಿಸಬೇಕೆಂದು ಅವನು ಯೋಚಿಸಿ ಆ ಪತ್ರವನ್ನು ತನ್ನ ಸ್ವಾಮಿಗೆ ಮುಟ್ಟಿಸಲು ಸಂಬುಗೆಯ ಓಲೆಕಾರ ಸಾಲಕನನ್ನು ನೇಮಿಸಿದನು. ಪ್ರತೀಹಾರಿಯು ಬಂದು ವತ್ಸರಾಜನಿಗೆ ಬರೆದಿದ್ದ ಲೇಖನವನ್ನು ಪ್ರಧಾನಿಗೆ ತಂದುಕೊಟ್ಟು ಅದರೊಡನೆ ರಾಜನಿಗೆ ಕಳುಹಿಸಬೇಕೆಂದಿದ್ದ ರಕ್ಷಾಸೂತ್ರವನ್ನು ಮುತ್ತೈದೆಯರೆಲ್ಲರ ಕೈಯಲ್ಲೂ ಮುಟ್ಟಿಸಿ ಬೇಗ ಕಳುಹಿಸುವುದಾಗಿ ರಾಜಮಾತೆಯವರು ಹೇಳಿದರೆಂದು ತಿಳಿಸಿದಳು. ಎಲ್ಲ ಮುತ್ತೈದೆಯರ ಕೈಯಲ್ಲೂ ರಕ್ಷಾಸೂತ್ರವನ್ನು ಮುಟ್ಟಿಸಿ ತರಬೇಕಾದರೆ ಹೊತ್ತಾಗಿ ಹೋಗುತ್ತದೆ. ಆದ್ದರಿಂದ ಯೌಗಂಧರಾಯಣನು "ಎಲ್ಲರ ಕೈಯಲ್ಲಿ ಮುಟ್ಟಿಸಿದರೂ ಸರಿಯೆ ಮುಟ್ಟಿಸದಿದ್ದರೂ ಸರಿಯೆ. ರಕ್ಷಾಸೂತ್ರವನ್ನು ಕೊಡಬೇಕೆಂದು ರಾಜಮಾತೆಯವರಿಗೆ ತಿಳಿಸು" ಎಂದು ಹೇಳಿ ಪ್ರತೀಹಾರಿಯನ್ನು ಕಳುಹಿಸಿದನು.

ಅಷ್ಟರಲ್ಲಿ ಹಂಸಕನೆಂಬ ವತ್ಸರಾಜನ ಬೆಂಗಾವಲಿಗನು ತ್ವರೆಯಿಂದ ಅಲ್ಲಿಗೆ ಬಂದನು. ಎಂದೂ ಸ್ವಾಮಿಯನ್ನಗಲದ ಹಂಸಕನು ಇಂದು ಒಬ್ಬನೇ ಬರಬೇಕಾದರೆ ಯಾವ ಅನಿಷ್ಟ ಒದಗಿದೆಯೋ ಎಂದು ಯೌಗಂಧರಾಯಣನ ಎದೆ ತಲ್ಲಣಗೊಂಡಿತು.

ಅವನು ತಕ್ಷಣವೆ "ಹಂಸಕ, ಸ್ವಾಮಿಯವರು ನಾಗವನಕ್ಕೆ ಹೋಗಲಿಲ್ಲವಷ್ಟೆ ?" ಎಂದು ಕೇಳಿದನು. ಕುಗ್ಗಿದ ದನಿಯಲ್ಲಿ ಹಂಸಕನು ಅವರು ನೆನ್ನೆಯೇ ಹೋದರೆಂದನು.

ಯೌಗಂಧರಾಯಣನು ಮುಂದಿನ ಸಂಗತಿಯನ್ನು ಊಹಿಸಿಕೊಂಡು "ಇನ್ನು ಹೇಳಿ ಕಳಿಸುವುದು ವ್ಯರ್ಥ. ಇನ್ನೂ ಆಸೆಯೇನಾದರು ಇದೆಯೊ ಅಥವಾ ನಾವು ಈಗಲೇ ಪ್ರಾಣ ಬಿಡಬೇಕೋ ?" ವಿಷಾದಪೂರಿತವಾದ ಕ್ಷೀಣ ಸ್ವರದಲ್ಲಿ ಕೇಳಿದನು.

ಹಂಸಕನು "ಪ್ರಭು ಇನ್ನೂ ಜೀವಿಸಿದ್ದಾರೆ" ಎಂದನು.

"ಹಾಗಾದರೆ ಸ್ವಾಮಿ ಸೆರೆಸಿಕ್ಕಿರಬಹುದಲ್ಲವೆ? ಇನ್ನು ವತ್ಸರಾಜನ ಮಂತ್ರಿಗಳಿಗೆ ಅಪಕೀರ್ತಿ ತಟ್ಟಿತು. ಕಾರ್ಯಪಟುವಾದ ರುಮಣ್ವಂತನೆಲ್ಲಿ ಹೋದನು? ನಮ್ಮ ಸೇನೆ ಶತ್ರು ವಶವಾಯಿತೋ ಇಲ್ಲವೆ ಕಾಳಗದಲ್ಲಿ ಮಡಿಯಿತೋ?" ಯೌಗಂಧರಾಯಣನು ಪ್ರಶ್ನಿಸಿದನು. ಸೈನ್ಯವು ಜೊತೆಯಲ್ಲಿ ಇದ್ದಿದ್ದರೆ ಈ ಅನರ್ಥವು ಉಂಟಾಗುತ್ತಿರಲಿಲ್ಲವೆಂದು ಹಂಸಕನು ಹೇಳಿದನು.

ಯೌಗಂಧರಾಯಣನು ಹಂಸಕನನ್ನು ಕೂರಿಸಿಕೊಂಡು ರಾಜನು ಸೆರೆಯಾದ ಸಂಗತಿಯನ್ನು ವಿವರಿಸಲು ಕೇಳಿದನು.

ಹಂಸಕನು ಹೇಳತೊಡಗಿದನು—"ಬೆಳಕು ಹರಿಯುವುದಕ್ಕೆ ಮೊದಲೇ ಪ್ರಭು ಪಾಳಯದಿಂದ ಹೊರಟು ನರ್ಮದಾ ನದಿಯನ್ನು ದಾಟಿ ವೇಣುವನದಲ್ಲಿ ಹೆಂಗಸರನ್ನು ನಿಲ್ಲಿಸಿ ಆನೆಯನ್ನು ಹಿಡಿಯಲು ಬೇಕಾದಷ್ಟು ಸೈನ್ಯವನ್ನು ಮಾತ್ರ ಜೊತೆಯಲ್ಲಿ ಕರೆದುಕೊಂಡು ನಾಗವನಕ್ಕೆ ಹೋದರು. ಹೊತ್ತು ಹುಟ್ಟಿ ಸ್ವಲ್ಪ ಮೇಲೆ ಬರುವಷ್ಟರಲ್ಲಿ ಆನೆಯ ಹಿಂಡೊಂದು ಕಣ್ಣಿಗೆ ಬಿತ್ತು. ಅಲ್ಲಿದ್ದ ಕಾಲಾಳೊಬ್ಬನು 'ಇಲ್ಲಿಂದ ಒಂದು ಕ್ರೋಶ ದೂರದಲ್ಲಿ ಉಗುರು ದಂತಗಳನ್ನುಳಿದು ಉಳಿದ ಮೈಯೆಲ್ಲಾ ನೀಲಿ ಬಣ್ಣದಿಂದ ಕೂಡಿದ್ದ ಆನೆಯೊಂದನ್ನು ಕಂಡೆ' ಎಂದು ಹೇಳಿದ. ಕೇಳಿದ್ದೆ ತಡ ಪ್ರಭು ಅವನಿಗೆ ನೂರು ಹೊನ್ನನ್ನು ಬಹುಮಾನವಾಗಿ ಕೊಟ್ಟು 'ಇದು ಗಜಶಾಸ್ತ್ರದಲ್ಲಿ ಹೇಳಿರುವ ನೀಲಕುವಲಯ ತನುವಿನ ಚಕ್ರವರ್ತಿ ಲಕ್ಷಣವುಳ್ಳ ಆನೆ. ಜೋಪಾನ. ನೀವು ಈ ಹಿಂಡನ್ನು ಕಾದುಕೊಂಡಿರಿ. ನಾನು ವೀಣೆಯನ್ನು ಬಾರಿಸಿ ಅದನ್ನು ತರುತ್ತೇನೆ' ಎಂದರು."

ಯೌಗಂಧರಾಯಣನು ಕೇಳಿದನು. "ಆಗ ರುಮಣ್ವಂತ ಸ್ವಾಮಿಯನ್ನು ಏಕೆ ತಡೆಯಲಿಲ್ಲ?"

ಹಂಸಕನು ಮುಂದುವರಿಸಿದನು........ "ನಿಮಗೆ ದಿಗ್ಗಜವನ್ನಾದರೂ ಹಿಡಿದು ತರುವುದು ಅಸಾಧ್ಯವಲ್ಲ. ಆದರೆ ನೀವು ಹೋಗುವ ಸ್ಥಳ ಅಪಾಯಕರವಾದುದು. ಅಲ್ಲದೆ ಗಡಿನಾಡಿನ ಜನರು ಅನಾಗರಿಕರು. ಆದ್ದರಿಂದ ಈ ಹಿಂಡನ್ನು ಕಾಲಾಳುಗಳು ನೋಡಿಕೊಳ್ಳಲಿ. ನಿಮ್ಮೊಡನೆ ನಾವೂ ಅಲ್ಲಿಗೆ ಬರುತ್ತೇವೆ. ನೀವೊಬ್ಬರೇ ಹೋಗಲಾಗದೆಂದು ರುಮಣ್ವಂತನು ವಿಜ್ಞಾಪಿಸಿಕೊಂಡನು.

"ಆದರೂ ಪ್ರಭು ಒಪ್ಪದೆ ತಮ್ಮ ಪ್ರಾಣದ ಮೇಲೆ ಆಣೆಯಿಟ್ಟುಕೊಂಡರು. ಬಳಿಕ ಇಪ್ಪತ್ತು ಜನ ಕಾಲಾಳುಗಳನ್ನು ಮಾತ್ರ ಜೊತೆಯಲ್ಲಿ ಕರೆದುಕೊಂಡು ಕುದುರೆ

ಯನ್ನೇರಿ ಅಲ್ಲಿಂದ ಹೊರಟರು. ಹಾಗೆ ಸ್ವಲ್ಪ ದೂರ ಹೋದಮೇಲೆ ಸಾಲ ವೃಕ್ಷದ ನೆಳಲಿನಲ್ಲಿ ಆ ಆನೆ ಕಾಣಿಸಿತು.

"ಸ್ವಾಮಿ ಕುದುರೆಯಿಂದಿಳಿದು ದೇವತೆಗಳಿಗೆ ನಮಸ್ಕರಿಸಿ ವೀಣೆಯನ್ನು ತೆಗೆದು ಕೊಂಡರು. ಅಷ್ಟರಲ್ಲಿ ಹಿಂದುಗಡೆಯಿಂದ ಆರ್ಭಟವೆದ್ದಿತು. ಮಾವುತರಿಂದಲೂ ಆಯುಧಧಾರಿಗಳಾದ ಭಟರಿಂದಲೂ ತುಂಬಿದ ಆ ಕೃತಕ ಆನೆ ಸ್ವಾಮಿಯ ಮೇಲೆ ಸಾಗಿ ಬಂತು. ಅವರು ತಮ್ಮನ್ನು ಅನುಸರಿಸಲು ಇತರರಿಗೆ ಹೇಳಿ ಶತ್ರು ಸೈನ್ಯ ದೊಳಕ್ಕೆ ನುಗ್ಗಿದರು.

"ಯುದ್ಧ ಒಂದೇ ಸಮನೆ ಸಾಗಿತು. ನಮ್ಮ ಕಡೆಯವರೆಲ್ಲಾ ಉರುಳಿದರು. ಶೂರರಂತೆ ಹೋರಾಡಿ ಸಂಜೆಯ ಇಳಿಹೊತ್ತಿನಲ್ಲಿ ದಣಿದ ಸ್ವಾಮಿ ಎಚ್ಚರತಪ್ಪಿ ದರು. ಶತ್ರುಗಳು ಅನೇಕ ಅಂಬುಗಳನ್ನು ತಂದು ಅವರನ್ನು ಕಟ್ಟಿ ಹಿಂಸಿಸಿದರು. ಸ್ವಲ್ಪ ಹೊತ್ತಿನಮೇಲೆ ಪ್ರಭು ಎಚ್ಚೆತ್ತರು. 'ಅಯ್ಯೋ ಇವನು ನನ್ನ ಒಡ ಹುಟ್ಟಿದವನನ್ನು ಕೊಂದನು. ಇವನು ನನ್ನ ತಂದೆಯನ್ನು ಕೀರಿಸಿದನು. ಇವ ನಿಂದ ನನ್ನ ಮಗ ಸತ್ತನು' ಎಂದು ಕೂಗಿಕೊಳ್ಳುತ್ತ ಶತ್ರುಗಳು ಹೆದರಿಕೆಯಿಂದ ದಿಕ್ಕಾಪಾಲಾಗಿ ಓಡಿಹೋದರು. ಅನಂತರ ಅವರಲ್ಲೊಬ್ಬ ಬಂದು ಪ್ರಭುವನ್ನು ದಕ್ಷಿಣಕ್ಕೆ ತಿರುಗಿಸಿ ಕೂರಿಸಿ ಅಸ್ತವ್ಯಸ್ತವಾದ ಅವರ ಮುಡಿಯನ್ನು ಕಟ್ಟಿದನು. ಬಳಿಕ ಕೈಯಲ್ಲಿ ಕತ್ತಿ ಹಿಡಿದು ಅವರನ್ನು ಕೊಲ್ಲಲು ರಭಸದಿಂದ ಅವನು ಓಡಿ ಬರುತ್ತಾ ಇರುವಾಗ........"

ಅಷ್ಟರಲ್ಲಿ ಯೌಗಂಧರಾಯಣನು ಉದ್ವೇಗದಿಂದ "ಹಂಸಕ, ಸ್ವಲ್ಪ ನಿಲ್ಲಿಸು. ಉಸಿರೆಳೆದುಕೊಳ್ಳುತ್ತೀನೆ" ಎಂದನು, ಬಹು ಕಷ್ಟದಿಂದ ಉಸಿರೆಳೆದುಕೊಳ್ಳುತ್ತ.

ಹಂಸಕನು ಸ್ವಲ್ಪ ತಡೆದು ಮತ್ತೆ "ಅವನು ಓಡಿಬರುತ್ತಾ ರಕ್ತದ ಕೆಸರಿನಲ್ಲಿ ಜಾರಿ ಬಿದ್ದು ಸತ್ತನು" ಎಂದು ಹೇಳಿದನು.

ಯೌಗಂಧರಾಯಣನು ಸಂತೋಷದಿಂದ ಹೇಳಿದನು. "ಸದ್ಯ ಆ ಪಾಪಿ ಬಿದ್ದ ನಲ್ಲ. ಸ್ವಾಮಿಯನ್ನು ಭೂದೇವಿಯೇ ಕಾಪಾಡಿದಳು."

ಹಂಸಕನು ಮುಂದುವರಿಸಿ "ಪ್ರದ್ಯೋತನ ಅಮಾತ್ಯ ಶಾಲಂಕಾಯನನು ಮೂರ್ಛೆ ಯಿಂದ ಎಚ್ಚೆತ್ತು ಬಂದು ಸ್ವಾಮಿಯ ಕಟ್ಟುಗಳನ್ನು ಬಿಚ್ಚಿಸಿದನು. ಸ್ವಾಮಿ ಯನ್ನು ಡೋಲಿಯಲ್ಲಿ ಮಲಗಿಸಿಕೊಂಡು ಅವನು ಉಜ್ಜಯಿನಿಗೆ ಕರೆದುಕೊಂಡು ಹೋದನು—" ಅವನು ದುಃಖದ ಕಥೆಯನ್ನು ಹೇಳಿ ಮುಗಿಸಿದನು.

ಯೌಗಂಧರಾಯಣನು ಮುಂದೆ ತನ್ನ ಸ್ವಾಮಿ ಅನುಭವಿಸಬೇಕಾದ ಅವಮಾನವನ್ನು ನೆನೆದು "ಈ ಕೇಡಿನಿಂದ ರಾಜನು ಹೇಗೆ ಪಾರಾಗುವನೋ ! ಪ್ರದ್ಯೋತನು ಬಯಸಿದಂತೆಯೇ ನಡೆದುಹೋಯಿತಲ್ಲವೆ ! ಸೆರೆಮನೆಯ ಬವಣೆಯನ್ನು ಸ್ವಾಮಿ ಹೇಗೆ ಸಹಿಸುವನೊ !" ಎಂದು ಚಿಂತೆಗೊಳಗಾದನು.

ಪ್ರತೀಹಾರಿಯು ಮುತ್ತೈದೆಯರ ಕೈಯಲ್ಲಿ ಮುಟ್ಟಿಸಿ ತಂದ ರಕ್ಷಾಸೂತ್ರವನ್ನು ಯೌಗಂಧರಾಯಣನಿಗೆ ಕೊಡಹೋದಳು. ಅದನ್ನು ಅವನು ನಿರಾಕರಿಸಿ ಸ್ವಾಮಿಗೊದಗಿದ ಗಂಡಾಂತರವನ್ನು ಪ್ರತೀಹಾರಿಗೆ ತಿಳಿಸಿ ಆ ವಿಷಯವನ್ನು ರಾಜಮಾತೆಗೆ ಬಿನ್ನವಿಸುವಂತೆ ಹೇಳಿದನು. ಈ ದುಃಖವಾರ್ತೆಯನ್ನು ರಾಜಮಾತೆಗೆ ತಟಕ್ಕನೆ ತಿಳಿಸಿಬಿಟ್ಟರೆ ಎಲ್ಲಿ ಅವಳ ಹೃದಯ ಬಿರಿಯುತ್ತದೆಯೊ ಎಂದು ಅವನಿಗೆ ಚಿಂತೆ.

ಆದ್ದರಿಂದ "ರಾಜಮಾತೆಗೆ ಸಂದೇಹವುಂಟಾಗುವಂತೆ ಮೊದಲು ಯುದ್ಧವರ್ಣನೆ ಮಾಡು. ಬಳಿಕ ಸಂಶಯದಿಂದ ಅವಳು ಶೋಕಿಸುವಾಗ ಸರಿಯಾದ ವಿವರವನ್ನು ತಿಳಿಸು" ಎಂದು ಪ್ರತೀಹಾರಿಗೆ ಅವನು ಹೇಳಿ ಕಳುಹಿಸಿದನು.

ಮಂತ್ರಿಯು ಆಮೇಲೆ "ಸ್ವಾಮಿಯನ್ನು ನೀನೇಕೆ ಬಿಟ್ಟು ಬಂದೆ ?" ಎಂದು ಹಂಸಕನನ್ನು ಕೇಳಿದನು.

"ನಾನೇನೋ ಹೋಗಬೇಕೆಂದಿದ್ದೆ, ಆದರೆ ಶಾಲಂಕಾಯನು ಈ ವಿಷಯವನ್ನು ಕೌಶಾಂಬಿಗೆ ಮುಟ್ಟಿಸಬೇಕೆಂದು ಅಪ್ಪಣೆ ಮಾಡಿದನು" ಹಂಸಕ ಉತ್ತರಿಸಿದನು.

"ಸರಿ, ಸ್ವಾಮಿ ನನಗೇನನ್ನೂ ಹೇಳಲಿಲ್ಲವೆ ?" ಯೌಗಂಧರಾಯಣನು ಪ್ರಶ್ನಿಸಿದನು.

"ನಾನು ಬರುವ ಮುನ್ನ ಅವರನ್ನು ಪ್ರದಕ್ಷಿಣೆ ಮಾಡಿದಾಗ ಹನಿದುಂಬಿದ ಕಣ್ಣಿಂದ ನೋಡುತ್ತಾ ಎಷ್ಟೋ ಮಾತನ್ನು ಹೇಳಬೇಕೆಂದಿರುವಂತೆ ತೋರಿದರೂ 'ಹೋಗಿ ಯೌಗಂಧರಾಯಣನನ್ನು ಕಾಣು' ಎಂದಿಷ್ಟು ಮಾತ್ರ ಹೇಳಿದರು" ಹಂಸಕನು ಕುಗ್ಗಿದ ದನಿಯಲ್ಲಿ ಹೇಳಿದನು.

ತನ್ನೊಬ್ಬನನ್ನೇ ನೋಡಲು ರಾಜನು ಏಕೆ ಹೇಳಿದನೆಂದು ಯೌಗಂಧರಾಯಣನಿಗೆ ಯೋಚನೆಯಾಯಿತು. ಅರಸನ ಅನ್ನವನ್ನು ತಾನು ತಿಂದೂ ಅವನಿಗೆ ಯಾವ ಕೃತಜ್ಞತೆಯನ್ನೂ ತಾನು ತೋರಲಿಲ್ಲವೆಂದು ಅವನು ಬೇಗುದಿಗೊಂಡನು.

ಪ್ರತೀಹಾರಿಯು ರಾಜಮಾತೆಗೆ ಆ ವ್ಯಸನವಾರ್ತೆಯನ್ನು ತಿಳಿಸಿದಾಗ ಅವಳಿಗೆ

ಸುಸಾನ್ನಧೆಯುಂಟಾಯಿತು. ಅರಮನೆಯೆಲ್ಲಾ ಈ ಸುದ್ದಿ ಕಾಡ್ಗಿಚ್ಚಿನಂತೆ ಹಬ್ಬಿ ಎಲ್ಲರೂ ಅಳತೊಡಗಿದರು.

ಯೌಗಂಧರಾಯಣನ ಬಳಿಗೆ ಪ್ರತೀಹಾರಿ ಬಂದು "ಈಗ ಪ್ರತಿಕ್ರಿಯೆ ಬಿಡಿ ನಮ್ಮೇನು ತಾನೆ ಸಾಧ್ಯ? ಮಂತ್ರಿಗಳನ್ನು ಕರೆಸಿ ಮುಂದಿನ ಕಾರ್ಯವನ್ನು ನಿರ್ಧರಿಸಬೇಕು. ಕಷ್ಟಗಳಲ್ಲಿ ಎದೆಗುಂದದೇ, ಕೆಲಸ ಬಿದ್ದಾಗ ಸುಮ್ಮನೆ ಕೂರದೆ. ಬಾಲ್ಯದಲ್ಲಿ ನನ್ನ ಮಗನಿಗೆ ಜೊತೆಗಾರನಾಗಿಯೂ ನನ್ನ ಮಗನಂತೆಯೇ ಇರುವ ಬುದ್ಧಿವಂತನಾದ ಯೌಗಂಧರಾಯಣನನ್ನು, ನನ್ನ ಮಗನನ್ನು ಕರೆದುಕೊಂಡು ಬಾ ಎಂದು ಕೇಳಿಕೊಳ್ಳುತ್ತೇನೆ" ಎಂದು ಹೇಳಬೇಕೆಂದು ರಾಜಮಾತೆ ನನ್ನನ್ನು ಕಳಿಸಿದ್ದಾರೆ ಎಂದು ಹೇಳಿದಳು.

ಶೋಕವಿಹ್ವಲನಾದ ಯೌಗಂಧರಾಯಣನಿಗೆ ರಾಜಮಾತೆಯ ಸಮಯೋಚಿತ ಮಾತುಗಳಿಂದ ಹುರುಪುಹುಟ್ಟಿತು. ತಾನು ಮುಂದೆ ಮಾಡಬೇಕಾದ ಕಾರ್ಯಭಾರ ಅವನ ಮನಸ್ಸಿಗೆ ಹೊಳೆಯಿತು.

ಅವನು ನೀರನ್ನು ತರಿಸಿ ಆಚಮನ ಮಾಡಿ "ಪ್ರಭು ಹಾಗೆ ಹೇಳಿದ್ದಾರೆ, ರಾಜಮಾತೆ ಹೀಗೆ ಹೇಳಿದ್ದಾರೆ. ಶತ್ರುಗಳ ಕೈಗೆ ಸಿಕ್ಕಿ ರಾಹುಗ್ರಸ್ತ ಚಂದ್ರನಂತಿರುವ ಒಡೆಯನನ್ನು ಸೆರೆಯಿಂದ ಬಿಡಿಸಿ ತರದಿದ್ದರೆ ನಾನು ಯೌಗಂಧರಾಯಣನೇ ಅಲ್ಲ" ಎಂದು ಪ್ರತಿಜ್ಞೆ ಮಾಡಿದನು.

ಯೌಗಂಧರಾಯಣನ ಕಾರ್ಯಭಾರಿ ನಿರ್ಮುಂಡಕನು ಅಷ್ಟರಲ್ಲಿ ಯೌಗಂಧರಾಯಣನ ಬಳಿಗೆ ಬಂದು "ಪ್ರಭುವಿನ ಶಾಂತಿಗಾಗಿ ಮಾಡಿಸಿದ್ದ ಸಂತರ್ಪಣೆಯಲ್ಲಿ ಭೋಜನಕ್ಕೆ ಕುಳಿತಿದ್ದ ಹುಚ್ಚನಂತಿದ್ದ ಬ್ರಾಹ್ಮಣನೊಬ್ಬನು 'ನೀವೆಲ್ಲಾ ಸಂತೋಷವಾಗಿ ಊಟಮಾಡಿ. ಮುಂದೆ ಈ ರಾಜವಂಶಕ್ಕೆ ಒಳ್ಳೆಯದಾಗುವುದು' ಎಂದು ಹೇಳಿ ಅದೃಶ್ಯವಾದನು" ಎಂದು ಪ್ರಧಾನಿಗೆ ತಿಳಿಸಿದನು.

ಅನಂತರ ಬ್ರಾಹ್ಮಣನೊಬ್ಬನು ಅಲ್ಲಿಗೆ ಪ್ರವೇಶಿಸಿ "ದ್ವೈಪಾಯನರೇ ಈ ಬಟ್ಟೆಗಳನ್ನು ಉಟ್ಟುಕೊಂಡು ಬಂದು ಭವಿಷ್ಯವನ್ನು ನುಡಿದು ಹೋದರು" ಎಂದು ಆ ಹುಚ್ಚು ಬ್ರಾಹ್ಮಣನು ಬಿಟ್ಟಿದ್ದ ಬಟ್ಟೆಗಳನ್ನು ಪ್ರಧಾನಿಗೆ ಕೊಟ್ಟನು.

ಯೌಗಂಧರಾಯಣನು ಅವನ್ನು ಉಟ್ಟುಕೊಂಡು "ಇದೇ ನನ್ನಿರವನ್ನು ಮಾರ್ಪಡಿಸಿ ದೊರೆಯನ್ನು ಬಿಡಿಸುವುದು. ಮರವನ್ನು ಕಡೆದರೆ ಬೆಂಕಿ ಹುಟ್ಟುವುದು. ನೆಲವನ್ನು ಅಗೆದರೆ ನೀರು ಬರುವುದು. ಉತ್ಸಾಹಶಾಲಿಗಳಿಗೆ

ಅಸಾಧ್ಯವಾದುದು ಯಾವುದೂ ಇಲ್ಲ. ಸರಿಯಾಗಿ ಮಾಡಿದ ಪ್ರಯತ್ನಗಳೆಲ್ಲ ನೆರವೇರುವುವು" ಎಂದು ಅವನು ರಾಜಮಾತೆಯನ್ನು ಹೋಗಿ ಕಂಡನು.

ಪ್ರಾಪ್ತವಯಸ್ಕಳಾದ ವಾಸವದತ್ತೆಯ ಮದುವೆಯ ಚಿಂತೆ ಮಹಾಸೇನ ಅಂಗಾರವತಿಯರನ್ನು ಬಾಧಿಸುತ್ತಿತ್ತು. ಅನೇಕ ರಾಜಪುತ್ರರು ಕನ್ಯಾರ್ಥಿಗಳಾಗಿ ತಮ್ಮ ದೂತರನ್ನು ಮಹಾಸೇನನ ಬಳಿಗೆ ಕಳಿಸುತ್ತಿದ್ದರು. ಮಹಾಸೇನನು ವತ್ಸರಾಜನಿಗೆ ಮಗಳನ್ನು ಕೊಡಬೇಕೆಂದು ನಿಶ್ಚಯಿಸಿದ್ದುದರಿಂದ ಯಾವ ಸಂಬಂಧವನ್ನೂ ಒಪ್ಪಿರಲಿಲ್ಲ. ಅದಕ್ಕಾಗಿ ಕೃತಕ ಗಜವನ್ನು ರಚಿಸಿ ಕಾಡಿನಲ್ಲಿ ಬಿಡಿಸಿದ್ದನು. ತನ್ನ ತಂತ್ರಕ್ಕೆ ವತ್ಸರಾಜನು ಸಿಕ್ಕಿಬಿದ್ದನೊ ಇಲ್ಲವೊ ಎಂಬುದು ಅವನಿಗಿನ್ನೂ ಗೊತ್ತಿರಲಿಲ್ಲ. ಅತ್ತ ದಿನವೂ ಬರುವ ಕನ್ಯಾರ್ಥಿಗಳನ್ನು ಸತ್ಕರಿಸಿ ಅವನು ಕಳಿಸುತ್ತಿದ್ದನು.

ಅವನು ಬಯಸಿದ ಗುಣಗಳೆಲ್ಲವೂ ಒಬ್ಬನಲ್ಲಿ ಇರುವ ವರನು ಅದುವರೆಗೂ ಸಿಕ್ಕಿರಲಿಲ್ಲ. ಹೆಸರಾಂತ ಕುಲದವನೂ, ರೂಪವಂತನೂ, ದಯಾಳುವೂ, ಮೃದುಗುಣವುಳ್ಳವನಾದರೂ ಬಲಶಾಲಿಯಾದ ವರನನ್ನು ಅವನು ಹುಡುಕುತ್ತಿದ್ದನು.

ಒಮ್ಮೆ ಮಹಾಸೇನ ಅಂಗಾರವತಿಯರು ಮಗಳ ಮದುವೆಯನ್ನು ಕುರಿತು ಮಾತನಾಡುತ್ತಿದ್ದರು. ವಾಸವದತ್ತೆಗೆ ವೀಣೆಯನ್ನು ಕಲಿಯಲು ಆಸೆಯಾಗಿದೆಯೆಂದೂ ಅದಕ್ಕಾಗಿ ಉಪಾಧ್ಯಾಯನನ್ನು ನೇಮಿಸಬೇಕೆಂದೂ ಅಂಗಾರವತಿ ವಿಜ್ಞಾಪಿಸಿಕೊಂಡಳು.

ಮಹಾಸೇನನು "ಮದುವೆಗೆ ನೆರೆದಿರುವ ಮಗಳಿಗೆ ಉಪಾಧ್ಯಾಯನೇಕೆ! ಗಂಡನೇ ಕಲಿಸಿಕೊಡುವನು" ಎಂದು ಹೇಳಿ, "ಕಾಶಿರಾಜನ ಉಪಾಧ್ಯಾಯನು ತಮ್ಮ ರಾಜಪುತ್ರನಿಗೆ ಕನ್ಯೆಯನ್ನು ಕೇಳಲು ಬಂದಿದ್ದಾನೆ" ಎಂದನು.

"ಎಲ್ಲಿಗೆ ಕೊಟ್ಟರೆ ಮಗಳು ಸುಖವಾಗಿರುವಳೊ ಅಲ್ಲಿಗೆ ಕೊಡಿ" ಎಂದು ತನ್ನ ಅಭಿಪ್ರಾಯವನ್ನು ಅಂಗಾರವತಿ ತಿಳಿಸಿದಳು. ಆದರೆ ನಿರ್ದಿಷ್ಟವಾಗಿ ಯಾರಿಗೆ ಕೊಡಬೇಕೆಂಬುದನ್ನು ತಿಳಿಸುವಂತೆ ಮಹಾಸೇನನು ಅಂಗಾರವತಿಗೆ ಹೇಳುತ್ತಿರುವಷ್ಟರಲ್ಲಿ ಕಂಚುಕಿ ತ್ವರೆಯಿಂದ ಬಂದು ವತ್ಸರಾಜನನ್ನು ಶಾಲಂಕಾಯನು ಸೆರೆಹಿಡಿದನೆಂದನು.

ರಾಜನು ಹರ್ಷದಿಂದ "ಏನಂದೆ?" ಎಂದನು.

ಕಂಚುಕಿ ಮತ್ತೆ ತಾನು ಹೇಳಿದುದನ್ನೇ ಹೇಳಿದನು

"ಉದಯನನೆ ?" ಮಹಾಸೇನನು ಆಶ್ಚರ್ಯದಿಂದ ಕೇಳಿದನು.

"ಹೌದು, ಸಂದೇಹವೇಕೆ ?"

ಮಹಾಸೇನನಿಗೆ ತನ್ನ ಉಪಾಯ ಇಷ್ಟುಮಟ್ಟಿಗೆ ಕೈಗೂಡುವುದೆಂಬ ನಂಬಿಕೆಯಿರಲಿಲ್ಲ. ವತ್ಸರಾಜನು ನಿಜವಾಗಿಯೂ ಸಿಕ್ಕಿದನೆ ಎಂಬ ಅವನಿಗೆ ಸಂದೇಹವೂ ಹರ್ಷವೂ ಏಕಕಾಲದಲ್ಲುಂಟಾದವು.

ಆದ್ದರಿಂದ "ಏನು ಶತಾನೀಕನ ಮಗ! ಸಹಸ್ರಾನೀಕನ ಮೊಮ್ಮಗ! ಕೌಶಾಂಬಿಯ ಒಡೆಯ! ವತ್ಸರಾಜ ಸೆರೆಸಿಕ್ಕಿದನೆ!" ಎಂದು ಮತ್ತೆ ಮತ್ತೆ ಅವನು ಕೇಳಿದನು.

ಅದಕ್ಕೆಲ್ಲಾ ಕಂಚುಕಿ ಖಂಡಿತವಾಗಿಯೂ ವತ್ಸರಾಜ ಸೆರೆಸಿಕ್ಕಿದನೆಂದು ಉತ್ತರಿಸಿದನು.

"ಹಾಗಾದರೆ ಯೌಗಂಧರಾಯಣ ಸತ್ತನೇನು ?" ಮಹಾಸೇನನು ಪ್ರಶ್ನಿಸಿದನು.

ಕಂಚುಕಿ "ಅವನು ಕೌಶಾಂಬಿಯಲ್ಲಿದ್ದಾನೆ" ಎಂದನು.

ಆದರೂ ಮಹಾಸೇನನಿಗೆ ಅವನ ಮಾತಿನಲ್ಲಿ ವಿಶ್ವಾಸ ಉಂಟಾಗಲಿಲ್ಲ. ಯೌಗಂಧರಾಯಣನಂತಹ ಮೇಧಾವಿ ಇರುವಾಗ ಬಲಶಾಲಿಯಾದ ವತ್ಸರಾಜನು ಸೆರೆಸಿಕ್ಕಿರಲಾರನೆಂದು ಅವನ ಎಣಿಕೆ. ಆದ್ದರಿಂದ ಅವನು "ಹಾಗಿದ್ದರೆ ವತ್ಸರಾಜನನ್ನು ಹಿಡಿದಿಲ್ಲ" ಎಂದನು.

ಶಾಲಂಕಾಯನನೇ ವತ್ಸರಾಜನೊಡನೆ ರಾಜಧಾನಿಗೆ ಬಂದಿರುವನೆಂದು ಕಂಚುಕಿ ಹೇಳಿದಮೇಲೆ ಅವನಿಗೆ ನಂಬಿಕೆಯಾಯಿತು. ಈಗ ತಾನು ಮಹಾಸೇನನಾದೆನೆಂದು ಅವನು ಹಿಗ್ಗಿದನು.

ಅಂಗಾರವತಿಯು "ವತ್ಸರಾಜನನ್ನು ಹಿಡಿದು ತಂದಿದ್ದರೆ ಇನ್ನು ವಾಸವದತ್ತೆಯನ್ನು ಯಾರಿಗೂ ಕೊಡುವುದಾಗಿ ನಾನು ವಾಗ್ದಾನ ಮಾಡುವುದಿಲ್ಲ" ಎಂದಳು.

ವತ್ಸರಾಜನು ಮಾತ್ರ ಸೆರೆಯಾಗಲಿಲ್ಲ, ಅವನ ಘೋಷವತಿ ವೀಣೆಯೂ ಶಾಲಂಕಾಯನ ಕೈಸೇರಿತ್ತು. ವತ್ಸರಾಜನನ್ನು ಉಚಿತವಾಗಿ ಸತ್ಕರಿಸಿ ಕರೆತರಬೇಕೆಂದೂ ಅವನನ್ನು ಕರೆತರುವಾಗ ಅವನನ್ನು ನೋಡಲು ಬರುವ ಯಾರಿಗೂ ಅಡ್ಡಿಮಾಡಕೂಡದೆಂದೂ ತನ್ನ ಮುಖ್ಯಮಂತ್ರಿಯಾದ ಭರತರೋಹಕನಿಗೆ ಕಂಚುಕಿಯ ಕೈಯಲ್ಲಿ ಮಹಾಸೇನನು ಹೇಳಿ ಕಳುಹಿಸಿದನು. ಮಹಾಸೇನನ ಉತ್ಸಾಹವನ್ನು ಕಂಡು ಅಂಗಾರವತಿಯು ಅವನು ಇಷ್ಟು ಸಂತೋಷಪಟ್ಟುದನ್ನು

ತಾನೆಂದೂ ಕಂಡಿರಲಿಲ್ಲವೆಂದು ಆಶ್ಚರ್ಯಪಟ್ಟಳು. ಮಹಾಸೇನನು ಅವಳಿಗೆ ವತ್ಸರಾಜನ ಕುಲ, ರೂಪು, ವಿದ್ಯೆ, ಗರ್ವಗಳನ್ನು ವಿವರಿಸಿ ಅವನು ಹೇಗೆ ತನ್ನನ್ನು ಗೌರವಿಸದಿರುವನೆಂಬುದನ್ನು ತಿಳಿಸಿದನು.

ಕಂಚುಕಿಯು ಘೋಷವತಿ ವೀಣೆಯನ್ನು ತಂದು ಮಹಾಸೇನನಿಗೆ ಒಪ್ಪಿಸಿದನು. ಅದನ್ನು ವಾಸವದತ್ತೆಗೆ ಕೊಡಲು ಮಹಾಸೇನನು ನಿಶ್ಚಯಿಸಿದನು.

ಆಮೇಲೆ ಅವನು ವತ್ಸರಾಜನನ್ನು ಅರಮನೆಗೆ ಕರೆದುತಂದು ಅವನ ಗಾಯ ಗಳಿಗೆ ಔಷಧೋಪಚಾರವನ್ನು ಮಾಡಬೇಕೆಂದೂ ತನ್ನ ಮುಖ್ಯಮಂತ್ರಿಗೆ ಹೇಳಲು ಕಂಚುಕಿಗೆ ಆಜ್ಞಾಪಿಸಿದನು. ವತ್ಸರಾಜನ ಮೇಲಿದ್ದ ಅವನ ಹಗೆತನ ಕರಗಿ ಮನಸ್ಸು ಅವನ ಕ್ಷೇಮದ ಬಗ್ಗೆ ಕಾತರಗೊಂಡಿತು. ವತ್ಸರಾಜನು ಗುಣ ಮುಖನಾದಮೇಲೆ ಅವನಿಗೆ ಯಾವ ಅನಾನುಕೂಲವೂ ಆಗದಂತೆ ಅವನು ಏರ್ಪಡಿಸಿ ಅವನನ್ನು ಸೆರೆಯಲ್ಲಿ ಇಡಿಸಿದನು.

ಯೌಗಂಧರಾಯಣನು ಪ್ರತಿಜ್ಞೆ ಮಾಡಿದಮೇಲೆ ವತ್ಸರಾಜನ ವಿದೂಷಕ ಮತ್ತು ರುಮಣ್ವಂತರೊಡನೆ ವೇಷ ಮರೆಸಿಕೊಂಡು ಉಜ್ಜಯಿನಿಗೆ ಹೋದನು. ವಿದೂಷ ಕನು ತಿರುಪೆಯವನಂತೆ ವೇಷ ಹಾಕಿಕೊಂಡು ತನ್ನ ನಗೆಮಾತಿನಿಂದ ಜನರನ್ನು ನಗಿಸುತ್ತಿದ್ದನು. ಯೌಗಂಧರಾಯಣನು ಹುಚ್ಚನಂತೆ ನಟಿಸುತ್ತಿದ್ದನು. ರುಮ ಣ್ವಂತನು ಶ್ರಮಣಕನ ವೇಷವನ್ನು ತಾಳಿದನು.

ಹೀಗೆ ಮೂವರೂ ತಮ್ಮ ಸುಳಿವು ಇತರರಿಗೆ ಗೊತ್ತಾಗದಂತೆ ವರ್ತಿಸುತ್ತಾ ವತ್ಸ ರಾಜನನ್ನು ಸೆರೆಯಿಂದ ಬಿಡಿಸುವ ಕಾರ್ಯಾಚರಣೆಯನ್ನು ಪ್ರಾರಂಭಿಸಿದರು.

ವಿದೂಷಕನು ತನ್ನ ಹಾಸ್ಯೋಕ್ತಿಗಳಿಂದ ಜನರನ್ನು ಮೆಚ್ಚಿಸಿ, ಅರಮನೆಗೆ ಮಾತ್ರವಲ್ಲ, ವತ್ಸರಾಜನಿದ್ದ ಸೆರೆಮನೆಗೂ ಹೋಗಿ ಬರುವಷ್ಟು ಅವಕಾಶವನ್ನು ಮಾಡಿಕೊಂಡಿದ್ದನು. ಅವನ ಮಾತನ್ನು ಕೇಳಿ ದ್ವಾರಪಾಲಕರು ನಗುತ್ತಿದ್ದರೆ ಹೊರತು ಅವನನ್ನು ತಡೆಯುತ್ತಿರಲಿಲ್ಲ. ಹಾಗೆ ಸೆರೆಮನೆಗೆ ಹೋದಾಗ ವತ್ಸ ರಾಜನನ್ನು ಕಂಡು ಅವನಿಗೆ ತಮ್ಮ ಪ್ರಯತ್ನವನ್ನೂ ಕೌಶಾಂಬಿಯ ಸುದ್ದಿ ಯನ್ನೂ ಅವನು ತಿಳಿಸುತ್ತಿದ್ದನು

ಯೌಗಂಧರಾಯಣ ರುಮಣ್ವಂತರು ಬೀದಿಬೀದಿಯಲ್ಲಿ ಅಲೆಯುತ್ತ ಆಯಕಟ್ಟಿನ ಸ್ಥಳಗಳಲ್ಲಿ ಗುಟ್ಟಾಗಿ ತಮ್ಮವರನ್ನು ನೇಮಿಸುತ್ತಾ ನಗರದ ಸಮಾಚಾರವನ್ನು ಸಂಗ್ರಹಿಸುತ್ತಿದ್ದರು. ಆಗಾಗ್ಗೆ ಎಲ್ಲಾದರೂ ಒಂದು ಗೊತ್ತಾದ ಸ್ಥಳದಲ್ಲಿ ಮೂವರೂ ಸೇರಿ ಮುಂದಿನ ಕಾರ್ಯವನ್ನು ನಿರ್ಧರಿಸುತ್ತಿದ್ದರು.

 

ಒಂದು ದಿನ ಯೌಗಂಧರಾಯಣ ವಿದೂಷಕರು ಕಡುಬಿಗಾಗಿ ಜಗಳವಾಡುವಂತೆಯೂ ಅವರ ಜಗಳವನ್ನು ಶ್ರಮಣಕ ವೇಷಧಾರಿ ರುಮಣ್ವಂತನು ಬಿಡಿಸುವಂತೆಯೂ ನಟಿಸುತ್ತಾ ನಿರ್ಜನವಾದ ಅಗ್ನಿಗೃಹಕ್ಕೆ ಹೋದರು.

ವಿದೂಷಕನು ತಾನು ಅಂದು ವತ್ಸರಾಜನನ್ನು ಕಂಡುದನ್ನು, ಅವನ ಯೋಗಕ್ಷೇಮವನ್ನು ಮಂತ್ರಿಗಳಿಗೆ ತಿಳಿಸಿದನು. ಯೌಗಂಧರಾಯಣನು ಮರುದಿನ ರಾಜನನ್ನು ಬಿಡುಗಡೆ ಮಾಡುವ ಹಂಚಿಕೆಯನ್ನು ಹೂಡಿದ್ದನು. ಯಾವ ಕುಟಿಲ ಗಜದಿಂದ ವತ್ಸರಾಜನನ್ನು ಮಹಾಸೇನನು ಸೆರೆಹಿಡಿದಿದ್ದನೋ ಅದೇ ಗಜದ ನೆಪದಿಂದ ಅವನನ್ನು ವಂಚಿಸುವ ಉಪಾಯವನ್ನು ಅವನು ಮಾಡಿದ್ದನು.

ಮಹಾಸೇನನ ಗಜಶಾಲೆಯಲ್ಲಿ 'ನಲಾಗಿರಿ' ಎಂಬ ಆನೆಯಿತ್ತು. ಅದಕ್ಕೆ ಸಿಟ್ಟು ಬರಿಸಿ, ಅದು ಮಾವುತನ ಅಂಕೆ ತಪ್ಪುವಂತೆ ಮಾಡಿದರೆ ಮಹಾಸೇನನು ವತ್ಸರಾಜನ ಸಹಾಯವನ್ನು ಕೋರಿ ಸೆರೆಯಿಂದ ಅವನನ್ನು ಬಿಡಿಸುವನು. ರಾಜನು ವೀಣೆಯನ್ನು ಬಾರಿಸಿ ಆ ಆನೆಯನ್ನು ಸ್ವಾಧೀನಪಡಿಸಿಕೊಂಡು, ಅದರ ಮೇಲೆ ಏರಿ ಉಜ್ಜಯಿನಿಯಿಂದ ತಪ್ಪಿಸಿಕೊಂಡು ಹೋಗುವಂತೆ ಅನುಕೂಲಗಳನ್ನು ಯೌಗಂಧರಾಯಣನು ಕಲ್ಪಿಸಿದನು.

ನಲಾಗಿರಿಗೆ ಮತ್ತು ಬರುವಂತೆ ಮಾಡಲು ಅದು ನಿಲ್ಲುವ ಮತ್ತು ಮೇಯುವ ಸ್ಥಳಗಳಲ್ಲಿ ಮಂತ್ರೌಷಧಿಗಳನ್ನು ಅವನು ಇಡಿಸಿದ್ದನು. ಅದಕ್ಕೆ ಧೂಪ ಹಾಕಲೂ, ಆನೆಗಳು ಬೆಂಕಿಗೆ ಹೆದರುವುದರಿಂದ ಗಜಶಾಲೆಯ ಹತ್ತಿರದ ಮನೆಯೊಂದಕ್ಕೆ ಬೆಂಕಿಯಿಡಿಸಲೂ ಮತ್ತು ಅದು ದಿಗ್ಭ್ರಾಂತವಾಗುವಂತೆ ಮಾಡಲು ಅದೇ ಸಮಯದಲ್ಲಿ ದೇವಸ್ಥಾನದ ಗಂಟೆಗಳು ಮೊಳಗುವಂತೆಯೂ ಅವನು ಆಗಲೇ ವ್ಯವಸ್ಥೆ ಮಾಡಿದ್ದನು. ತನ್ನ ಈ ಉಪಾಯವನ್ನು ವಿದೂಷಕ ರುಮಣ್ವಂತರಿಗೆ ತಿಳಿಸಿ "ನಾಳೆ ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಸಕಾಲವಾಗಿದೆ" ಎಂದು ಪ್ರಭುವಿಗೆ ತಿಳಿಸುವಂತೆ ವಿದೂಷಕನಿಗೆ ಅವನು ಹೇಳಿದನು.

ಯೌಗಂಧರಾಯಣನ ಆ ಪ್ರಯತ್ನ ಹಾಳಾಗುವುದೆಂದು ವಿದೂಷಕನು ಖಿನ್ನನಾದನು. ಏಕೆಂದರೆ ವತ್ಸರಾಜನು ವಾಸವದತ್ತೆಯಲ್ಲಿ ಅನುರಕ್ತನಾಗಿರುವುದು ಅವನಿಗೆ ತಿಳಿದಿತ್ತು.

ವತ್ಸರಾಜನು ವಾಸವದತ್ತೆಯಲ್ಲಿ ಅನುರಕ್ತನಾದುದು ಹೀಗೆ—ಒಮ್ಮೆ ವಾಸವದತ್ತೆ ಭಗವತಿ ಯಕ್ಷಿಣಿಯ ಆಲಯಕ್ಕೆ ಪೂಜೆಗೆಂದು ಮೇಲ್ಮುಸುಕಿಲ್ಲದ ಪಲ್ಲಕ್ಕಿಯಲ್ಲಿ ಕುಳಿತು ಹೋಗುತ್ತಿದ್ದಳು. ಬೋಯಿಗಳು ಪಲ್ಲಕ್ಕಿಯನ್ನು ಹೊತ್ತುಕೊಂಡು

ಹೋಗುತ್ತಿದ್ದಾಗ ಅವರು ಹೆಗಲು ಬದಲಾಯಿಸಲು ಸೆರೆಮನೆಯ ಮುಂದೆ ಸ್ವಲ್ಪ ನಿಂತರು. ಸೆರೆಮನೆಯ ಹೊರಗೆ ನಿಂತಿದ್ದ ವತ್ಸರಾಜನು ರಾಜಪುತ್ರಿಯನ್ನು ಕಣ್ಣಾರೆ ನೋಡಿ ಅವಳ ರೂಪುಲಾವಣ್ಯಗಳಿಗೆ ಮಾರುಹೋದನು. ಅವಳೂ ಅವನನ್ನು ನೋಡಿದಳು. ಅವರ ಹೃದಯದಲ್ಲಿ ಅನುರಾಗವು ಉದಿಸಿತು. ಅಂದಿನಿಂದ ವತ್ಸರಾಜನಿಗೆ ಬಂಧನವೇ ಹಿತವಾಗಿ ಕಂಡಿತು.

ವತ್ಸರಾಜನ ಈ ಪ್ರಣಯ ಪ್ರಸಂಗವನ್ನು ಯೌಗಂಧರಾಯಣ, ರುಮಣ್ವಂತರಿಗೆ ವಿದೂಷಕನು ತಿಳಿಸಿ "ನಿನ್ನ ಪ್ರಯತ್ನ ನನಗೆ ರುಚಿಸುವುದಿಲ್ಲ. ನಾನು ಕಾಮಾತುರನಾಗಿರುವೆನೆಂದು ಭಾವಿಸಬೇಡ. ಮಹಾಸೇನನು ಮಾಡಿದ ಅವಮಾನಕ್ಕೆ ತಕ್ಕ ಪ್ರತೀಕಾರವನ್ನು ಮಾಡಲು ಹೀಗೆ ಮಾಡುತ್ತಿದ್ದೇನೆಂದು ನೀನು ಯೌಗಂಧರಾಯಣನಿಗೆ ತಿಳಿಸು" ಎಂದು ನನಗೆ ಪ್ರಭು ಹೇಳಿದರೆಂದು ಹೇಳಿದನು.

ಮುಂದಿನ ಆಗುಹೋಗುಗಳನ್ನು ನೆನೆಯದೆ ಹೀಗೆ ರಾಜನು ಅಕಾಲದಲ್ಲಿ ಕಾಮಾಸಕ್ತನಾದನೆಂದು ಯೌಗಂಧರಾಯಣನು ಚಿಂತೆಗೊಳಗಾದನು.

ವಿದೂಷಕನಿಗಾದರೊ ಆ ಛದ್ಮವೇಷ ಸಾಕಾಗಿತ್ತು. ನಿರುತ್ಸಾಹದ ಧ್ವನಿಯಲ್ಲಿ ಅವನು "ಸ್ವಾಮಿಗಾಗಿ ನಮ್ಮ ಪುರುಷಪ್ರಯತ್ನವೆಲ್ಲಾ ಮುಗಿಯಿತು. ಇನ್ನು ರಾಜಧಾನಿಗೆ ನಾವು ಮರಳೋಣ" ಎಂದನು.

ಪ್ರತಿಜ್ಞಾಬದ್ಧನಾದ ಯೌಗಂಧರಾಯಣನು ತಮ್ಮನ್ನೇ ನಂಬಿರುವ ರಾಜನನ್ನು ಬಿಟ್ಟು ಹೋಗುವುದು ಸರಿಯಲ್ಲವೆಂದನು.

ವಿದೂಷಕನು ವ್ಯಂಗ್ಯವಾಗಿ "ಹೀಗೆಯೇ ಇದ್ದರೆ ನಾವು ಮುಪ್ಪಾಗಬೇಕು" ಎಂದನು.

"ಇದನ್ನೆಲ್ಲ ನಾವು ಸ್ವಾಮಿಗಾಗಿಯೇ ಮಾಡುತ್ತಿರುವುದರಿಂದ ಮುಪ್ಪು ಬಂದರೂ ಒಳ್ಳೆಯದೆ" ನಿರಾಶನಾಗದೆ ಯೌಗಂಧರಾಯಣನು ಹೇಳಿದನು.

"ನಮ್ಮ ಪ್ರಯತ್ನ ಜನರಿಗೂ ರಾಜನಿಗೂ ತಿಳಿಯದೆ ಹೋದರೇನು ಪ್ರಯೋಜನ?" ವಿದೂಷಕನು ಆಕ್ಷೇಪಿಸಿದನು.

ಅದಕ್ಕೆ ಯೌಗಂಧರಾಯಣನ ಉತ್ತರ "ಗೊತ್ತಾಗಲಿ ಬಿಡಲಿ, ಸ್ವಾಮಿ ಕಾರ್ಯವಾದರೆ ಸರಿ" ಎಂದು.

ವಿದೂಷಕನು "ಹಾಗಾದರೆ ರಾಜನನ್ನೂ ರಾಜಪುತ್ರಿಯನ್ನೂ ಇಲ್ಲಿಂದ ಹೊರಡಿಸಿದರೆ ಕಾರ್ಯಸಿದ್ಧಿಯಾಗುವುದು" ಎಂದನು.

ತಕ್ಷಣ ಯೌಗಂಧರಾಯಣನು “ಅರ್ಜುನನು ಸುಭದ್ರೆಯನ್ನು ಒಯ್ದಂತೆ ರಾಜನು ವಾಸವದತ್ತೆಯನ್ನು ಹರಣಮಾಡುವಂತೆ ಮಾಡದಿದ್ದರೆ ನಾನು ಯೌಗಂಧರಾಯಣನೇ ಅಲ್ಲ. ಇದು ನನ್ನ ಎರಡನೆಯ ಪ್ರತಿಜ್ಞೆ. ಅಲ್ಲದೆ ಅವನೊಡನೆ ಘೋಷವತಿಯನ್ನೂ ಆ ನಲಾಗಿರಿಯನ್ನೂ ಹರಣ ಮಾಡಿಸದಿದ್ದರೆ ನಾನು ಯೌಗಂಧರಾಯಣನಲ್ಲ” ಎಂದು ಪುನಃ ಪ್ರತಿಜ್ಞೆಗೈದನು.

ಅಂದಿನ ಅವರ ಮಾತುಕತೆ ಮುಗಿಯಿತು. ಅಲ್ಲಿಂದ ಅವರು ಒಬ್ಬೊಬ್ಬರಾಗಿ ಬೇರೆ ಬೇರೆ ದಾರಿ ಹಿಡಿದು ತಮ್ಮ ತಮ್ಮ ಕಾರ್ಯಕ್ಕೆ ಹೊರಟುಹೋದರು.

ಯೌಗಂಧರಾಯಣನು ಅನೇಕ ಸ್ವಾಮಿಭಕ್ತರಾದ ಯೋಧರನ್ನು ಕೌಶಾಂಬಿಯಿಂದ ಕರೆಸಿದನು. ಅವರಲ್ಲಿ ಕೆಲವರನ್ನು ಉಜ್ಜಯಿನಿಯ ಆಯಕಟ್ಟಿನ ಸ್ಥಳಗಳಲ್ಲಿಯೂ ಮತ್ತೆ ಕೆಲವರನ್ನು ಮಹಾಸೇನನ ಅರಮನೆ, ಸೆರೆಮನೆಗಳ ಉಳಿಗಕ್ಕೂ ಯಾರಿಗೂ ಗೊತ್ತಾಗದಂತೆ ಸೇರಿಕೊಳ್ಳುವಂತೆ ಮಾಡಿದನು.

ಒಂದು ದಿನ ಯೌಗಂಧರಾಯಣನ ಹಂಚಿಕೆಯಂತೆ ನಲಾಗಿರಿಗೆ ಮತ್ತೇರಿ ಅದು ಸಿಟ್ಟಿಗೆದ್ದಿತು. ಅದನ್ನು ಹತೋಟಿಗೆ ತರಲು ಮಾವುತರು ಮಾಡಿದ ಪ್ರಯತ್ನವೆಲ್ಲ ವಿಫಲವಾಯಿತು. ಅದರ ಭಯಂಕರ ಕೋಪಕ್ಕೆ ಜನ ಬೆದರಿತು.

ಆಗ ಮಹಾಸೇನನು ವತ್ಸರಾಜನನ್ನು ಸೆರೆಯಿಂದ ಬಿಡುಗಡೆ ಮಾಡಿ ಆನೆಯನ್ನು ಸುಮ್ಮನಿರಿಸಲು ಅವನನ್ನು ಕೇಳಿಕೊಂಡನು. ವತ್ಸರಾಜನು ವೀಣೆಯನ್ನು ಬಾರಿಸಿ ಆನೆಯನ್ನು ವಶಪಡಿಸಿಕೊಂಡನು.

ಅನಂತರ ಮಹಾಸೇನನು ವತ್ಸರಾಜನನ್ನು ಸೆರೆಯಲ್ಲಿಡಲಿಲ್ಲ. ಅರಮನೆಯಲ್ಲೇ ಅವನು ಇದ್ದುಕೊಂಡು ವಾಸವದತ್ತೆಗೆ ವೀಣೆಯನ್ನು ಕಲಿಸಿಕೊಡಬೇಕೆಂದು ಕೋರಿದನು. ಅದಕ್ಕೆ ವತ್ಸರಾಜನೂ ಒಪ್ಪಿಕೊಂಡನು.

ಕ್ರಮೇಣ ವತ್ಸರಾಜ ವಾಸವದತ್ತೆಯರಲ್ಲಿದ್ದ ಪ್ರೇಮ ಬೆಳೆದು ಗಾಢವಾಯಿತು. ಯೌಗಂಧರಾಯಣನು ಅವರು ತಪ್ಪಿಸಿಕೊಂಡು ಹೋಗುವುದಕ್ಕೆ ಬೇಕಾದ ಏರ್ಪಾಟನ್ನು ಮಾಡಿದನು. ಒಂದು ರಾತ್ರಿ ವಾಸವದತ್ತೆಯದೇ ಆದ ‘ಭದ್ರಾವತಿ’ ಆನೆಯ ಮೇಲೆ ಕುಳಿತು ಪ್ರಣಯಿಗಳು ವತ್ಸ ದೇಶಕ್ಕೆ ಪ್ರಯಾಣ ಮಾಡಿದರು.

ಅವರು ಮಗಧ ದೇಶದ ಗಡಿಯನ್ನು ದಾಟುವಷ್ಟರಲ್ಲಿ ಮಹಾಸೇನನ ಕಡೆಯವರಿಗೆ ಅದು ಗೊತ್ತಾಗಿ ಅವರು ನಲಾಗಿರಿಯ ಮೇಲೆ ಕುಳಿತು ವತ್ಸರಾಜನನ್ನು ಬೆನ್ನಟ್ಟಿದನು. ಯೌಗಂಧರಾಯಣನು ತಡೆದು ಅವರೊಡನೆ ಯುದ್ಧ ಹೂಡಿದನು. ವೇಷ

ಮರೆಸಿಕೊಂಡಿದ್ದ ವತ್ಸರಾಜನ ಭಟರೂ ಬಂದು ಯೌಗಂಧರಾಯಣನನ್ನು ಕೂಡಿಕೊಂಡರು.

ಎರಡು ಪಕ್ಷಕ್ಕೂ ದೊಡ್ಡ ಯುದ್ಧವಾಯಿತು. ಹೋರಾಡುವಾಗ ಯೌಗಂಧರಾಯಣನ ಕತ್ತಿ ಆನೆಯೊಂದರ ದಂತಕ್ಕೆ ತಾಗಿ ಕೆಳಗೆ ಬಿದ್ದು ಹೋದುದರಿಂದ ನಿರಾಯುಧನಾದ ಅವನು ಶತ್ರುಗಳಿಗೆ ಸೆರೆಸಿಕ್ಕಿದನು. ಆದರೂ ತನ್ನ ಸ್ವಾಮಿ ಕಾರ್ಯ ನಿರ್ವಿಘ್ನವಾಗಿ ನೆರವೇರಿತೆಂದು ಅವನಿಗೆ ಸಂತೋಷ. ಅವನನ್ನು ನೋಡಲು ಜನರು ಕಿಕ್ಕಿರಿದು ನೆರೆಯುತ್ತಿದ್ದುದರಿಂದ ಅವರನ್ನು ಭಟರು ತಳ್ಳುತ್ತಿದ್ದರು.

ಯೌಗಂಧರಾಯಣನು "ನೋಡುವವರೆಲ್ಲ ನೋಡಲಿ. ಹಿಂದೆ ನನ್ನ ಹುಚ್ಚು ವೇಷವನ್ನು ನೋಡಿ ನಕ್ಕವರು ಇಂದು ನನ್ನ ಕಾರ್ಯವನ್ನು ಕಾಣುತ್ತಾರೆ" ಎಂದು ನಕ್ಕು ಭಟರೊಡನೆ ಸೆರೆಮನೆಗೆ ಹೋದನು.

ಸೆರೆಯಲ್ಲಿದ್ದ ಯೌಗಂಧರಾಯಣನ ಧೈರ್ಯವನ್ನು ಕೆಡಿಸಲು ಭಟನೊಬ್ಬನು ಅಲ್ಲಿಗೆ ಹೋಗಿ ವತ್ಸರಾಜನು ಸೆರೆಸಿಕ್ಕಿದನೆಂದು ಹುಸಿದನು. ಯೌಗಂಧರಾಯಣನು ಆ ಮಾತನ್ನು ನಂಬಲಿಲ್ಲ. ಭದ್ರಾವತಿಯ ಮೇಲೆ ಕುಳಿತು ಈಗಾಗಲೇ ತನ್ನ ಸ್ವಾಮಿ ವೇಗವಾಗಿ ಹೊರಟು ಮಗಧ ದೇಶದ ಗಡಿಯನ್ನು ದಾಟಿರುವನೆಂದು ನಿರಾಕರಿಸಿಬಿಟ್ಟನು.

ಮತ್ತೊಬ್ಬ ಭಟನು ಅವನ ಬಳಿಗೆ ಬಂದು "ನೀವು ಆಯುಧಾಗಾರದಲ್ಲಿರಬೇಕು. ಅಲ್ಲಿ ಕಾವಲುಗಾರರಿದ್ದಾರೆ" ಎಂದನು.

ಯೌಗಂಧರಾಯಣನು "ಓಹೊ ಕಾವಲೊ! ಕಾವಲಿರಬೇಕಾದ ಹೊತ್ತಿನಲ್ಲಿ ನಿದ್ದೆ ಮಾಡಿಬಿಟ್ಟರು. ರತ್ನ ಕಳುವಾಯಿತು! ಇನ್ನೇಕೆ ಬರಿ ಪೆಟ್ಟಿಗೆಯನ್ನು ಕಾಯುವುದು" ಗೇಲಿಮಾಡಿ ನಕ್ಕನು.

ಮಹಾಸೇನನ ಮುಖ್ಯಮಂತ್ರಿ ಭರತರೋಹಕನು ತನ್ನನ್ನೇ ವಂಚಿಸಿದ ಸ್ವಾಮಿಕಾರ್ಯದುರಂಧರನಾದ ಯೌಗಂಧರಾಯಣನನ್ನು ನೋಡಲು ಸೆರೆಮನೆಗೆ ಹೋದನು. ಹೋದುದೇ ತಡ ಅವನು ಯೌಗಂಧರಾಯಣನು ಮಾಡಿದ ವಂಚನೆಗಳನ್ನು ಎತ್ತಿ ಆಡಿ ಮೂದಲಿಸಿದನು.

ಯೌಗಂಧರಾಯಣನು ಸುಮ್ಮನಿರದೆ "ಅಂದು ಕೃತಕಗಜದಿಂದ ನಮ್ಮ ರಾಜನನ್ನು ಸೆರೆ ಹಿಡಿದಿರಿ. ನೀವು ಮಾಡಿದಂತೆ ಈಗ ನಾವೂ ಮಾಡಿದೆವು. ಅದರಲ್ಲಿ ತಪ್ಪೇನು ?" ಎಂದು ಪ್ರತಿಯಾಡಿದನು.

ಭರತರೋಹಕನು "ಆದರೆ ಮಹಾಸೇನನ ಮಗಳನ್ನು ಅಗ್ನಿಸಾಕ್ಷಿಯಾಗಿ ಶಿಷ್ಯೆಯೆಂದು ಪರಿಗ್ರಹಿಸಿ ಅವಳನ್ನು ನಿಮ್ಮ ರಾಜನು ಕಳ್ಳತನದಿಂದ ಕರೆದುಕೊಂಡು ಹೋದುದು ಸರಿಯೊ ?" ಎಂದು ಕೇಳಿದನು.

"ನಮ್ಮ ಸ್ವಾಮಿ ತಮ್ಮ ವಂಶಮರ್ಯಾದೆಗೆ ಅನುಗುಣವಾಗಿ ಹೆಂಡತಿಯರಿಗಲ್ಲದೆ ಮಿಕ್ಕವರಿಗೆ ಪಾಠ ಕಲಿಸುವುದಿಲ್ಲ. ಇದರಲ್ಲಿ ತಪ್ಪೇನು ?" ಯೌಗಂಧರಾಯಣನು ಉತ್ತರಿಸಿದನು.

"ವತ್ಸರಾಜನನ್ನು ಸೆರೆಯಿಂದ ಬಿಡಿಸಿ ನಮ್ಮ ರಾಜನು ಉಪಕಾರ ಮಾಡಲಿಲ್ಲವೆ?" ಭರತರೋಹಕನು ತಿರಸ್ಕಾರಪೂರ್ವಕವಾಗಿ ಪ್ರಶ್ನಿಸಿದನು.

"ಹಾಗೆಯೇ ನಲಾಗಿರಿಯ ಮದವನ್ನು ಅಡಗಿಸಿ ವತ್ಸರಾಜನೂ ಉಪಕಾರಮಾಡಿದನು."

"ಸರಿ, ಅವನನ್ನು ಮತ್ತೆ ಸೆರೆಯಲ್ಲಿಡದೆ ಬಿಟ್ಟದ್ದು ಉಪಕಾರವಲ್ಲವೆ ?"

"ಸತ್ಕಾರ ಬುದ್ಧಿಯಿಂದ ನೀವು ಅವನನ್ನು ಬಿಡುಗಡೆ ಮಾಡಲಿಲ್ಲ. ಉಪಕಾರ ಮಾಡಿದ ಅವನನ್ನು ಮತ್ತೆ ಸೆರೆಯಲ್ಲಿಟ್ಟರೆ ಜನರು ದೂರುವರೆಂಬ ಭಯದಿಂದ ಅವೆ !" ಯೌಗಂಧರಾಯಣನು ನಕ್ಕು ಹೇಳಿದನು.

ಭರತರೋಹಕನು "ಯಥಾರ್ಹನಾದರೂ ವತ್ಸರಾಜನನ್ನು ನಾವು ಸತ್ಕರಿಸಲಿಲ್ಲವೆ?" ಎನ್ನಲು "ಆದ್ದರಿಂದಲೇ ನಾವು ಮಹಾಸೇನನನ್ನು ಅಪಹರಿಸಲಿಲ್ಲ". ಅವನ ಬಾಯಿ ಮುಚ್ಚುವಂತೆ ಯೌಗಂಧರಾಯಣನು ಮಾತಿಗೆ ಮಾತುಕೊಟ್ಟನು. ಭರತರೋಹಕನು ಯೌಗಂಧರಾಯಣನಿಗೆ ಬುದ್ಧಿತಂತ್ರಗಳಲ್ಲಿ ಮಾತ್ರವಲ್ಲ ಮಾತಿನಲ್ಲಿಯೂ ಸೋಲಬೇಕಾಯಿತು !

ಕಂಚುಕಿ ಸೆರೆಮನೆಗೆ ಬಂದು ಮಹಾಸೇನನು ಸ್ವಾಮಿಭಕ್ತನಾದ ಯೌಗಂಧರಾಯಣನಿಗೆ ಬಂಗಾರದ ಪಾತ್ರೆಯನ್ನು ಬಹುಮಾನವಾಗಿ ಕಳಿಸಿರುವನೆಂದು ಹೇಳಿ ಅವನಿಗೆ ಕೊಡಹೋದನು. ಆದರೆ ಯೌಗಂಧರಾಯಣನು ಶತ್ರುವಿನ ಮೆಚ್ಚನ್ನು ಸ್ವೀಕರಿಸುವುದಿಲ್ಲವೆಂದು ಅದನ್ನು ನಿರಾಕರಿಸಿದನು.

ಅತ್ತ ಅರಮನೆಯಲ್ಲಿ ಅಂಗಾರವತಿ ಮಗಳ ಅಗಲಿಕೆಯನ್ನು ತಾಳಲಾರದೆ ಮಾಳಿಗೆಯಿಂದ ಬಿದ್ದು ಆತ್ಮಹತ್ಯವನ್ನು ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ ಮಹಾಸೇನನು ಅವಳನ್ನು ತಡೆದು "ವಾಸವದತ್ತೆಯ ಮದುವೆ ಕ್ಷಾತ್ರಧರ್ಮಾನುಸಾರವಾಗಿಯೇ ನಡೆದಿದೆ. ಸಂತೋಷಪಡಬೇಕಾದಾಗ ಚಿಂತಿಸುವುದೇಕೆ ? ಅವರ

ಚಿತ್ರವನ್ನು ಬರೆಯಿಸಿ ಅವಕ್ಕೇ ಇಲ್ಲಿ ಮದುವೆ ಮಾಡಿಬಿಡೋಣ" ಎಂದು ಸಮಾಧಾನಪಡಿಸಿದನು. ಆಗಲೇ ಅವರ ಪಟಗಳಿಗೆ ಮಹಾಸೇನನು ಮದುವೆ ಮಾಡಿಸಿದನು.

ಯೌಗಂಧರಾಯಣನಿಗೆ ಈ ವಿಷಯ ಗೊತ್ತಾಗಿ ಶತ್ರು ಮಿತ್ರನಾದನೆಂದು ಕಂಚುಕಿಯ ಕೈಯಿಂದ ಬಂಗಾರದ ಪಾತ್ರೆಯನ್ನು ತೆಗೆದುಕೊಂಡನು. ಅವನು ಮಹಾಸೇನನ ಅಪ್ಪಣೆಯನ್ನು ಪಡೆದು ತನ್ನ ಪ್ರತಿಜ್ಞೆಗಳನ್ನು ಪೂರ್ಣವಾಗಿ ನೆರವೇರಿಸಿ ಕೌಶಾಂಬಿಗೆ ಸಂತೋಷದಿಂದ ಹಿಂದಿರುಗಿದನು.



# ಸ್ವಪ್ನವಾಸವದತ್ತ ನಾಟಕ

ವತ್ಸದೇಶದ ರಾಜ ಉದಯನನು ತನ್ನ ಪ್ರಿಯೆ ವಾಸವದತ್ತೆಯಲ್ಲೇ ಆಸಕ್ತನಾಗಿ ಅವಳ ಮಧುರ ಸಾನ್ನಿಧ್ಯದಲ್ಲೇ ಹೆಚ್ಚು ಕಾಲವನ್ನು ಕಳೆಯುತ್ತಿದ್ದನು. ವತ್ಸರಾಜನು ಅನ್ಯಮನಸ್ಕನಾಗಿದ್ದುದರಿಂದ ಅವನ ಪ್ರಧಾನಮಂತ್ರಿ ಯೌಗಂಧರಾಯಣನು ತನ್ನ ಬುದ್ಧಿಶಕ್ತಿಯಿಂದ ರಾಜ್ಯವನ್ನು ವಿಸ್ತರಿಸಬೇಕೆಂದು ನಿಶ್ಚಯಿಸಿದನು.

ಆ ಕಾಲಕ್ಕೆ ನೆರೆಯ ಮಗಧ ದೇಶದ ರಾಜ ಪ್ರದ್ಯೋತನು ಮಹಾ ಬಲಶಾಲಿಯಾಗಿದ್ದನು. ಅವನಿಗೆ ಪದ್ಮಾವತಿಯೆಂಬ ಮಗಳಿದ್ದಳು. ಅವಳಿಗೆ ಇನ್ನೂ ಮದುವೆಯಾಗಿರಲಿಲ್ಲ. ವತ್ಸರಾಜನಿಗೆ ಪದ್ಮಾವತಿಯನ್ನು ಮದುವೆ ಮಾಡಿಬಿಟ್ಟರೆ ಸುಲಭವಾಗಿ ವತ್ಸದೇಶ ವಿಸ್ತಾರವಾಗುವುದೆಂದು ಯೌಗಂಧರಾಯಣನು ಎಣಿಸಿದನು.

ಅಲ್ಲದೆ ಉದಯನನ ಆಸ್ಥಾನ ಜ್ಯೋತಿಷ್ಕರಾದ ಪುಷ್ಪಕ, ಭದ್ರ ಮೊದಲಾದವರು ಮುಂದೆ ಪದ್ಮಾವತಿ ಉದಯನನ ಅರಸಿಯಾಗುವಳೆಂದು ಭವಿಷ್ಯ ನುಡಿದಿದ್ದರು. ಅವರ ಭವಿಷ್ಯ ನೆರವೇರುವುದರಲ್ಲಿ ಯೌಗಂಧರಾಯಣನಿಗೆ ಸಂಶಯವಿರಲಿಲ್ಲ. ಏಕೆಂದರೆ ಹಿಂದೊಮ್ಮೆ ಕೇಡಾಗುವುದೆಂದು ಅವರು ಹೇಳಿದ್ದ ಮಾತು ಸುಳ್ಳಾಗಿರಲಿಲ್ಲ. ಆದ್ದರಿಂದ ಅವರ ಮಾತಿನಲ್ಲಿ ಯೌಗಂಧರಾಯಣನಿಗೆ ನಂಬಿಕೆ ಹುಟ್ಟಿತ್ತು.

ಆದರೆ ವಾಸವದತ್ತೆಯ ಮೇಲಿನ ಪ್ರೇಮದಿಂದ ಮರು ಮದುವೆಗೆ ಉದಯನ ಒಪ್ಪುವಂತಿರಲಿಲ್ಲ. ಹಿರಿಯ ಹೆಂಡತಿ ಇರುವಾಗ ಹೆಣ್ಣಿನ ಮೇಲೆ ಹೆಣ್ಣು ಕೊಡಲು ಪ್ರದ್ಯೋತನು ಒಪ್ಪುವುದು ಅಸಂಭವವಾಗಿತ್ತು.

ಆದ್ದರಿಂದ ಸ್ವಾಮಿಯ ಹಿತಕ್ಕಾಗಿ ಯೌಗಂಧರಾಯಣನು ರುಮಣ್ವಂತನೊಡನೆ ಆಲೋಚಿಸಿ ಒಂದು ಉಪಾಯ ಹೂಡಿದನು. ಅದನ್ನು ವಾಸವದತ್ತೆಗೂ ಅವಳ ಸಹೋದರ ಗೋಪಾಲಕನಿಗೂ ತಿಳಿಸಿ ಅವರನ್ನೂ ಒಡಂಬಡಿಸಿದನು. ತರುವಾಯ ಯೌಗಂಧರಾಯಣನು ತನ್ನ ಹಂಚಿಕೆಯಂತೆ ಲಾವಾಣಕವಹ್ನಿಯನ್ನು ಕಲ್ಪಿಸಿದನು.

ಮಗಧದೇಶಕ್ಕೆ ಹತ್ತಿರವಾಗಿ ವತ್ಸದೇಶದ ಗಡಿಯಲ್ಲಿ ಲಾವಾಣಕವೆಂಬ ರಮಣೀಯವಾದ ಗ್ರಾಮವಿತ್ತು. ಅಲ್ಲಿಗೆ ಬೇಟೆಯ ನೆಪದಲ್ಲಿ ಅರಸ ಅರಸಿಯರು ಹೋಗಿ ಬೀಡುಬಿಡುವಂತೆ ಯೌಗಂಧರಾಯಣನು ಏರ್ಪಡಿಸಿದನು.

ಒಂದು ದಿನ ವತ್ಸರಾಜನು ಬೇಟೆಯಾಡಲು ಬೀಡಿನಿಂದ ದೂರ ಹೋಗಿದ್ದಾಗ ಯೌಗಂಧರಾಯಣನು ಬೀಡಿಗೆ ಬೆಂಕಿ ಹಚ್ಚಿಸಿದನು. ಆ ಬೆಂಕಿಯಲ್ಲಿ ವಾಸವ ದತ್ತೆ ಸುಟ್ಟುಹೋದಳೆಂದೂ ಅವಳನ್ನು ರಕ್ಷಿಸಲು ನೆಗೆದ ಯೌಗಂಧರಾಯಣನೂ ಸತ್ತನೆಂದೂ ಸುಳ್ಳುಸುದ್ದಿಯನ್ನು ಹರಡಿಸಿದನು. ಅನಂತರ ಅವನು ವೃದ್ಧ ಬ್ರಾಹ್ಮಣನಂತೆಯೂ, ವಾಸವದತ್ತೆ ಅವಂತಿ ಕನ್ಯೆಯಂತೆಯೂ ವೇಷ ಧರಿಸಿ ಗೊತ್ತಾಗದಂತೆ ಲಾವಾಣಕದಿಂದ ಅವರು ಹೊರಟು ಸಮೀಪದಲ್ಲಿದ್ದ ಮಗಧ ದೇಶಕ್ಕೆ ಹೋದರು. ಲಾವಾಣಕದಲ್ಲಿ ರುಮಣ್ವಂತನು ಉಳಿದನು

ಮಗಧರಾಜನ ನಗರೋದ್ಯಾನದಲ್ಲಿ ಪ್ರದ್ಯೋತನ ರಾಣಿ ಮಹಾದೇವಿ ವಾಸಿಸು ತ್ತಿದ್ದಳು. ತಾಯಿಯನ್ನು ನೋಡಲು ರಾಜಕುಮಾರಿ ಪದ್ಮಾವತಿ ಅಂದು ಬಂದಿದ್ದಳು. ಅವಳನ್ನು ನೋಡಲು ಜನ ಕಿಕ್ಕಿರಿದಿದ್ದರು. ತಾಯಿಯನ್ನು ನೋಡಿಕೊಂಡು ಅರಮನೆಗೆ ಹೊರಟ ಅವಳಿಗೆ ದಾರಿ ಮಾಡಿಕೊಡಲು ರಾಜ ಭಟರು ನೆರವಿಯನ್ನು ಹಿಂದಕ್ಕೆ ನೂಕುತ್ತಿದ್ದರು.

ಆ ಸಮಯಕ್ಕೆ ವೇಷ ಮರೆಸಿಕೊಂಡಿದ್ದ ಯೌಗಂಧರಾಯಣ ವಾಸವದತ್ತೆಯರು ಬಂದು ಜನರ ಗುಂಪಿನಲ್ಲಿ ನಿಂತುಕೊಂಡರು. ಅವರನ್ನೂ ರಾಜಭಟರು ತಳ್ಳದೆ ಬಿಡಲಿಲ್ಲ.

ವಾಸವದತ್ತೆಗೆ ಬಹಳ ಸಂಕಟವಾಗಿ "ನಾನು ಹೀಗೆ ನೂಕಿಸಿಕೊಳ್ಳಬೇಕಾದ ಸ್ಥಿತಿಗೆ ಬಂದೆನಲ್ಲವೆ? ಇದರಿಂದ ನನಗಾದ ವ್ಯಥೆ ಮಾರ್ಗಾಯಾಸದಿಂದಲೂ ಆಗಲಿಲ್ಲ" ಎಂದು ಯೌಗಂಧರಾಯಣನೊಡನೆ ಹೇಳಿಕೊಂಡು ಕೊರಗಿದಳು.

ಅವನು ಏನು ತಾನೆ ಮಾಡಲು ಸಾಧ್ಯ. ಅವನಿಗೆ ಈ ಬಗೆಯ ಅನುಭವ ಹೊಸ ತಲ್ಲ. "ವೇಷ ಮರೆಸಿಕೊಂಡ ದೇವತೆಗಳಿಗೂ ತಿರಸ್ಕಾರ ತಪ್ಪುವುದಿಲ್ಲ. ಇವೆಲ್ಲ ನೀನು ಮೊದಲೇ ಅನುಭವಿಸಿ ಬಿಟ್ಟ ವೈಭವಗಳಲ್ಲವೆ! ಭಾಗ್ಯವಿತಾನವು ಚಕ್ರಾರಪಂಕ್ತಿಯಂತೆ ಉರುಳುತ್ತಿರುತ್ತದೆ" ಎಂದು ಸಮಾಧಾನಪಡಿಸಿದನು.

ಅಲ್ಲಿಗೆ ಕಂಚುಕಿ ಬಂದು "ಅರಸನಿಗೆ ನಿಂದೆ ಬಾರದಂತೆ ನೀವು ನಡೆಯಬೇಕು. ಪಟ್ಟಣದ ಪರಿಭವಕ್ಕೆ ಅಂಜಿ ತಪಸ್ವಿಗಳು ವಾಸಿಸುವ ಇಂಥ ಸ್ಥಳದಲ್ಲಿಯೂ ಕಟೂಕ್ತಿ ತಕ್ಕುದಲ್ಲ" ಎಂದು ಭಟರನ್ನು ತಡೆದನು.

ಕಂಚುಕಿಯ ಮಾತನ್ನು ಕೇಳಿ ಯೌಗಂಧರಾಯಣನು ಈತನು ವಿವೇಕಿಯೆಂದು ಕೊಂಡು ಮುಂದೆ ಬಂದು "ಹೀಗೆ ದಾರಿ ಬಿಡಿಸಲು ಕಾರಣವೇನು?" ಎಂದು ಅವ ನನ್ನು ಕೇಳಿದನು.

ಅದಕ್ಕೆ ಕಂಚುಕಿ "ತಾಯಿಯ ದರ್ಶನದ ಬಳಿಕ ಅರಮನೆಗೆ ಹೊರಡಬೇಕಾಗಿದ್ದ ಪದ್ಮಾವತಿ ಇಂದು ಇಲ್ಲಿಯೇ ತಂಗುತ್ತಾಳೆ. ಅವಳು ಇಲ್ಲಿರುವುದರಿಂದ ಆಶ್ರಮವಾಸಿಗಳಿಗೆ ಯಾವ ತೊಂದರೆಯೂ ಇಲ್ಲ. ಮುನಿಗಳು ಯಥೇಷ್ಟವಾಗಿ ತಮಗೆ ಬೇಕಾದ ಫಲಪುಷ್ಪತೀರ್ಥಗಳನ್ನು ಕೊಂಡೊಯ್ಯಬಹುದು. ಧರ್ಮಪ್ರಿಯೆಯಾದ ರಾಜಪುತ್ರಿ ಯಾರನ್ನೂ ಅಡ್ಡಿಪಡಿಸುವುದಿಲ್ಲ" ಎಂದನು.

ಯೌಗಂಧರಾಯಣನಿಗೆ ಪದ್ಮಾವತಿ ತಮ್ಮ ಭಾವೀ ರಾಣಿಯೆಂಬ ಮಮತೆಯೂ, ವಾಸವದತ್ತೆಗೆ ಸೋದರೀ ಸ್ನೇಹವೂ ಉಂಟಾದುವು.

ಪದ್ಮಾವತಿಯು ಚೇಟಿಯೊಡನೆ ತಾಪಸಿಯಿದ್ದ ಆಶ್ರಮಕ್ಕೆ ಬಂದಳು. ತಾಪಸಿ ಆದರದಿಂದ ರಾಜಪುತ್ರಿಯನ್ನು ಸ್ವಾಗತಿಸಿ ನಮಸ್ಕರಿಸಿದ ಆಕೆಯನ್ನು ಆಶೀರ್ವದಿಸಿದಳು.

"ಕುಲಕ್ಕೆ ತಕ್ಕ ರೂಪವೂ ಇದೆ. ರೂಪಕ್ಕೆ ತಕ್ಕಂತೆ ಮಾತೂ ಅತ್ಯಂತ ಮಧುರವಾಗಿದೆ"—ಪದ್ಮಾವತಿಯನ್ನು ನೋಡಿ ಅವಳ ಮಾತನ್ನು ಕೇಳಿ, ವಾಸವದತ್ತೆ ತನ್ನಲ್ಲೆ ಅಂದುಕೊಂಡಳು.

ತಾಪಸಿ ಚೇಟಿಯನ್ನು ಕುರಿತು "ನಮ್ಮ ರಾಜಪುತ್ರಿಯನ್ನು ವರಿಸಲು ಅನುರೂಪನಾದ ಯಾವ ರಾಜಕುಮಾರನೂ ಬರಲಿಲ್ಲವೆ ?" ಎಂದು ಕೇಳಿದಳು.

ಕೂಡಲೆ ಚೇಟಿ ಹೇಳಿದಳು—"ಉಜ್ಜಯಿನಿಯ ದೊರೆ ಪ್ರದ್ಯೋತನು ತನ್ನ ಮಗನಿಗೆ ರಾಜಪುತ್ರಿಯನ್ನು ತಂದುಕೊಳ್ಳಲು ದೂತರ ಕೈಯಲ್ಲಿ ಹೇಳಿಕಳಿಸುತ್ತಿರುವನು."

ತಾಪಸಿಗೆ ಸಂತೋಷವಾಯಿತ್ತು, ಅದು ಸರಿಯಾದ ಸಂಬಂಧವೆಂದು. ವಾಸವದತ್ತೆ ಹಾಗಾದರೆ ಇವಳು ನಮ್ಮವಳಾದಳೆಂದುಕೊಂಡಳು.

ಆಮೇಲೆ ಪದ್ಮಾವತಿ ತಾನು ಅಲ್ಲಿಗೆ ಬಂದುದಕ್ಕೆ ತನ್ನ ಅಲ್ಪ ಸೇವೆಯನ್ನು ತಾಪಸರಿಗೆ ಸಲ್ಲಿಸುವ ಬಯಕೆಯಿಂದ "ಮುನಿಜನರ ಇಷ್ಟಾರ್ಥವೇನಾದರೂ ಇದ್ದರೆ ನಮ್ಮಿಂದ ಪಡೆಯಬಹುದೆಂದು ಎಲ್ಲರಿಗೂ ತಿಳಿಸಿ ಬಾ" ಎಂದು ಕಂಚುಕಿಗೆ ನೇಮಿಸಿದಳು.

ಕಂಚುಕಿ ತಾಪಸರ ಬಳಿಗೆ ಹೋಗಿ, "ಯಾರಿಗೆ ತೀರ್ಥಘಟ, ವಸ್ತ್ರ ಮತ್ತು ಗುರುವಿಗೆ ದೀಕ್ಷಾಂತದಲ್ಲಿ ಕೊಡಬೇಕಾದ ಧನದಲ್ಲಿ ಇಷ್ಟವಿದೆಯೊ ಅವರು ನನಗೆ ತಿಳಿಸಬೇಕು. ನಿಮ್ಮ ಬಯಕೆ ಏನಿದ್ದರೂ ಉದಾರಶೀಲೆಯಾದ ರಾಜಕುಮಾರಿ

ಅವನ್ನು ನೆರವೇರಿಸುವೆನೆಂದು ಹೇಳಿ ನನ್ನನ್ನು ಕಳುಹಿಸಿದ್ದಾಳೆ." ಎಲ್ಲರಿಗೂ ಕೇಳುವಂತೆ ಅವನು ಗಟ್ಟಿಯಾಗಿ ಸಾರಿದನು.

ಅದನ್ನು ಕೇಳಿ ಯೌಗಂಧರಾಯಣನಿಗೆ ಹರ್ಷವಾಯಿತು. ಏಕೆಂದರೆ ಲಾವಾಣಕದಿಂದ ಬಂದಮೇಲೆ ವಾಸವದತ್ತೆಯನ್ನು ಯಾವುದಾದರೂ ಸುರಕ್ಷಿತವಾದ ಸ್ಥಳದಲ್ಲಿ ಇರಿಸಿ ತಾನು ವತ್ಸದೇಶಕ್ಕೆ ಮರಳಿ ತನ್ನ ಮುಂದಿನ ಉಪಾಯವು ನಿರ್ವಿಘ್ನವಾಗಿ ನಡೆಯುವಂತೆ ಅವನು ನೋಡಿಕೊಳ್ಳಬೇಕಾಗಿತ್ತು. ತಕ್ಕ ಆಶ್ರಯ ದೊರೆಯದೆ ವಾಸವದತ್ತೆಯನ್ನು ಬಿಟ್ಟು ಹೋಗುವಂತಿರಲಿಲ್ಲ. ಆದ್ದರಿಂದ ಪದ್ಮಾವತಿಯ ಬಳಿಯಲ್ಲಿ ವಾಸವದತ್ತೆಯನ್ನು ಬಿಟ್ಟು ಹೋಗಬಹುದೆಂಬ ಉಪಾಯ ಹೊಳೆದು ಅವನಿಗೆ ಸಂತೋಷವಾಯಿತು.

ತಟ್ಟನೆ ಅವನು ಮುಂದೆ ಬಂದು "ಅಯ್ಯಾ, ನನ್ನದೊಂದು ಕೋರಿಕೆಯಿದೆ" ಎಂದನು.

ಪದ್ಮಾವತಿ ತಾನು ಈ ತಪೋವನಕ್ಕೆ ಅದೃಷ್ಟವಶದಿಂದ ಬಂದುದು ಸಾರ್ಥಕವಾಯಿತೆಂದು ಹಿಗ್ಗಿದಳು.

ಈ ತಪೋವನವಾಸಿಗಳೆಲ್ಲ ನಿತ್ಯತೃಪ್ತರು! ಇವನು ಆಗಂತುಕನಾಗಿರಬೇಕೆಂದು ತಾಪಸಿಗೆ ಸಂದೇಹ.

ಯೌಗಂಧರಾಯಣನು "ಇವಳು ನನ್ನ ತಂಗಿ. ಈಕೆಯ ಪತಿ ದೇಶಾಂತರ ಹೋಗಿದ್ದಾನೆ. ಕೆಲವು ಕಾಲ ಇವಳಿಗೆ ನೀವು ಆಶ್ರಯ ಕೊಡಬೇಕು. ಧನ ಕನಕವಸ್ತ್ರಭೋಗಗಳಲ್ಲಿ ನನಗೆ ಆಸೆಯಿಲ್ಲ. ಗುಣಶೀಲೆಯಾದ ರಾಜಪುತ್ರಿ ನನ್ನ ತಂಗಿಯ ಶೀಲವನ್ನು ಕಾಪಾಡಬೇಕೆಂಬುದೇ ನನ್ನ ಕೋರಿಕೆ" ಎಂದನು.

ವಾಸವದತ್ತೆಗೆ ಮಂತ್ರಿ ತನ್ನನ್ನು ಇಲ್ಲಿ ಬಿಟ್ಟು ಹೋಗುವನೆಂದು ವ್ಯಸನವಾದರೂ ಅವನು ಮುಂದಾಲೋಚನೆಯಿಲ್ಲದೆ ಯಾವ ಕಾರ್ಯವನ್ನೂ ಮಾಡನೆಂಬ ನಂಬಿಕೆಯಿಂದ ಸುಮ್ಮನಾದಳು.

ಕಂಚುಕಿ "ಹಣ ಪ್ರಾಣ, ತಪೋಧನವನ್ನಾದರೂ ಕೊಡಬಹುದು. ಆದರೆ ಇವೆಲ್ಲಕ್ಕಿಂತ ನ್ಯಾಸರಕ್ಷೆ ತುಂಬ ಕಷ್ಟವಾದುದು" ಎಂದು ಹೇಳಿದರೂ, ಸ್ಥಿತಪ್ರಜ್ಞಳೂ ಸತ್ಯಸಂಧಳೂ ಆದ ಪದ್ಮಾವತಿ ವಾಸವದತ್ತೆಗೆ ಆಶ್ರಯ ಕೊಡಲೊಪ್ಪಿದಳು. ತಾಪಸಿ, ಚೇಟಿಯರು ರಾಜಕುಮಾರಿಯ ಆ ಔದಾರ್ಯವನ್ನು ಮೆಚ್ಚಿಕೊಂಡರು.

"ವತ್ಸೆ, ಪೂಜ್ಯೆಯ ಬಳಿ ಹೋಗು" ಎಂದು ಯೌಗಂಧರಾಯಣನು ವಾಸವದತ್ತೆಗೆ ಹೇಳಿದನು.

ವಾಸವದತ್ತೆ "ಮಂದಭಾಗ್ಯಳಾದ ತಾನು ಹೋಗದಿದ್ದರೆ ಬೇರೆ ಗತಿಯೇನು" ಎಂದು ತನ್ನಲ್ಲೆ ನೊಂದುಕೊಂಡು ಹೋದಳು.

ಪದ್ಮಾವತಿಗೆ ಆಗಲೇ ವಾಸವದತ್ತೆಯ ಮೇಲೆ ಎಲ್ಲೂ ಇಲ್ಲದ ಪ್ರೇಮವುಂಟಾಯಿತು. "ಬಾರಮ್ಮ ಬಾ, ಈಗ ನೀನು ನಮ್ಮವಳಾದೆ" ಪದ್ಮಾವತಿ ಪ್ರೀತಿ ತುಂಬಿದ ಧ್ವನಿಯಲ್ಲಿ ಕರೆದಳು.

ಸಾವಕಾಶವಾಗಿ ರಾಜಕುಮಾರಿಯ ಸಮೀಪಕ್ಕೆ ಹೋದ ವಾಸವದತ್ತೆಯನ್ನು ತಾಪಸಿ ಚೇಟಿಯರು ನೋಡಿ, ಈಕೆ ಯಾವಳೋ ರಾಜಕುಮಾರಿಯಾಗಿರಬೇಕೆಂದು ಸಂದೇಹಪಟ್ಟರು.

ಯೌಗಂಧರಾಯಣನ ಅರ್ಧ ಹೊರೆ ಇಳಿದಂತಾಯಿತು. ರಾಣಿಯನ್ನು ಸುರಕ್ಷಿತವಾಗಿ ಎಲ್ಲಿಡಬೇಕೆಂಬುದು ಅವನಿಗೆ ಸಮಸ್ಯೆಯಾಗಿತ್ತು. ಅದು ಸುಲಭವಾಗಿ ಬಗೆಹರಿಯಿತು. ಅಲ್ಲದೆ ಮತ್ತೆಲ್ಲೋ, ಯಾರ ಬಳಿಯೋ ಇರಿಸುವ ಬದಲು ಮುಂದೆ ವತ್ಸರಾಜನ ಅರಸಿಯಾಗುವವಳೆ ವಾಸವದತ್ತೆಗೆ ಆಶ್ರಯವಿತ್ತುದು ಅನುಕೂಲವೇ ಆಯಿತು. ಇದರಿಂದ ಮುಂದೆ ರಾಜನಿಗೆ ಗುಟ್ಟು ಬಯಲಾದಾಗ ಅವನು ವಾಸವದತ್ತೆಯನ್ನು ಶಂಕಿಸಲು ಕಾರಣವಿಲ್ಲ. ಏಕೆಂದರೆ ಅವಳ ಶೀಲಕ್ಕೆ ಸಾಕ್ಷಿಯಾಗಿ ಪದ್ಮಾವತಿಯೇ ಇರುತ್ತಾಳೆ.

ಇವನ್ನೆಲ್ಲ ನೆನೆದ ಹಾಗೆ ತಾನು ಹೂಡಿದ ಉಪಾಯ ಸುಸೂತ್ರವಾಗಿ ನಡೆಯಬಹುದೆಂಬ ಮತ್ತು ಜ್ಯೋತಿಷ್ಕರ ಆದೇಶ ಹುಸಿಯಾಗದೆಂಬ ನಂಬುಗೆ ಯೌಗಂಧರಾಯಣನಲ್ಲಿ ಬಲವಾಯಿತು. ಇನ್ನು ಉದಯನನ ಪ್ರಾಣ ರಕ್ಷಣೆ ಎರಡನೆಯ ಕೆಲಸ. ರುಮಣ್ವಂತನು ರಾಜನ ರಕ್ಷಣಾಭಾರವನ್ನು ಹೊತ್ತುಕೊಂಡಿದ್ದನು. ಆದರೂ ಯೌಗಂಧರಾಯಣನಿಗೆ ಕಳವಳ.

ಅಷ್ಟರಲ್ಲಿ ಮಧ್ಯಾಹ್ನದ ಉರಿಬಿಸಿಲಿಗೆ ಬಳಲಿದ ದಾರಿಹೋಕ ಬ್ರಹ್ಮಚಾರಿಯೊಬ್ಬನು ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳಲು ಆಶ್ರಮಕ್ಕೆ ಬರಲು ಅವನನ್ನು ಕಂಚುಕಿ ಸ್ವಾಗತಿಸಿದನು. ಪರಪುರುಷನಾದ ಬ್ರಹ್ಮಚಾರಿಯ ಎದುರಿಗೆ ಇರಲು ವಾಸವದತ್ತೆ ಅಸಮಾಧಾನಗೊಂಡಳು. ಇದನ್ನರಿತ ಪದ್ಮಾವತಿ ತನ್ನ ಆಶ್ರಯದಲ್ಲಿರುವ ಈಕೆಯ ಮನಸ್ಸು ನೋಯದಂತೆ ನೋಡಿಕೊಳ್ಳುವುದು ತನ್ನ ಕರ್ತವ್ಯವೆಂದುಕೊಂಡಳು.

ಬ್ರಹ್ಮಚಾರಿ ಆಚಮನ ಮಾಡಿ ದಣಿವಾರಿಸಿಕೊಂಡನು.

ಯೌಗಂಧರಾಯಣನು "ತಾವು ಎಲ್ಲಿಂದ ಬಂದಿರಿ ? ಎಲ್ಲಿಗೆ ಹೋಗುವಿರಿ ? ತಮ್ಮ ಸ್ಥಳ ಯಾವುದು ?" ಎಂದು ಬ್ರಹ್ಮಚಾರಿಯನ್ನು ಪ್ರಶ್ನಿಸಿದನು.

ಬ್ರಹ್ಮಚಾರಿ "ವೇದಗಳಿಗೆ ವಿಶೇಷಾರ್ಥವನ್ನು ಅಧ್ಯಯನ ಮಾಡಲು ವತ್ಸದೇಶಕ್ಕೆ ಸೇರಿದ ಲಾವಾಣಕ ಗ್ರಾಮದಲ್ಲಿದ್ದು ಈಗ ಅಲ್ಲಿಂದ ಬರುತ್ತಿದ್ದೇನೆ" ಎಂದನು.

ಯೌಗಂಧರಾಯಣನು ಕುತೂಹಲದಿಂದ "ಆಮೇಲೆ ?" ಎಂದನು.

ಲಾವಾಣಕದ ಹೆಸರನ್ನು ಕೇಳಿದ ವಾಸವದತ್ತೆಗೆ ದುಃಖ ಒತ್ತರಿಸಿ ಬಂದಿತು, ಪತಿಯ ಅಗಲಿಕೆಯಿಂದ.

ಬೀಡಿಗೆ ಬೆಂಕಿಯಿಟ್ಟು ಲಾವಾಣಕದಿಂದ ಹೊರಟ ಮೇಲೆ ಮುಂದೇನಾಯಿತ್ತು ಮತ್ತು ತನ್ನ ತಂತ್ರ ಎಷ್ಟುಮಟ್ಟಿಗೆ ಯಶಸ್ವಿಯಾಯಿತೆನ್ನುವುದು ಸದ್ಯಕ್ಕೆ ಯೌಗಂಧರಾಯಣನಿಗೆ ಗೊತ್ತಿಲ್ಲದ ವಿಷಯ. ಉದಯನ ವಾಸವದತ್ತೆಯರ ಪ್ರೇಮದ ಪರಿಯನ್ನು ಅವನು ತಿಳಿದಿದ್ದನು. ಹಗಲಿರುಳು ರಾಜನ ಕ್ಷೇಮ ಚಿಂತನೆಯಲ್ಲಿ ಅವನ ಮನಸ್ಸು ನಾಟಿತ್ತು. ತಾನು ಬಂದ ಮೇಲೆ ವತ್ಸರಾಜನು ಹೇಗಿದ್ದಾನೆ, ಏನು ಮಾಡುತ್ತಿದ್ದಾನೆಂಬುದನ್ನು ತಿಳಿಯಲು ಅವನಿಗೆ ತುಂಬ ಕಾತರ. ಯಾರೂ ಗುರುತಿಸದಂತೆ ವೇಷಮರೆಸಿಕೊಂಡು ಬರುವುದೇ ಪ್ರಯಾಸವಾಗಿರುವಾಗ ರಾಜನ ಸುದ್ದಿ ತಿಳಿಯುವುದು ಹೇಗೆ !

ಸಂದರ್ಭವಶಾತ್ ಬ್ರಹ್ಮಚಾರಿ ಅಲ್ಲಿಗೆ ಬಂದುದು ಕಾದ ನೆಲಕ್ಕೆ ಮಳೆ ಬಂದಂತಾಯಿತು. ತನ್ನ ವ್ಯಥೆಯನ್ನು ಬಿಗಿಹಿಡಿದುಕೊಂಡು ಬ್ರಹ್ಮಚಾರಿ ಮುಂದಿನ ಸಂಗತಿಯನ್ನು ತಿಳಿಸಿದನು, ಕೇಳುವವರ ಕುತೂಹಲ ಕೆರಳುವಂತೆ. "ಲಾವಾಣಕ ಗ್ರಾಮದಲ್ಲಿ ವತ್ಸರಾಜನೂ ಅವನ ಅರಸಿ ವಾಸವದತ್ತೆಯೂ ಬೀಡುಬಿಟ್ಟಿದ್ದರು. ಒಮ್ಮೆ ರಾಜನು ಬೇಟೆಗೆ ಹೋಗಿದ್ದಾಗ ಆ ಗ್ರಾಮಕ್ಕೆ ಬೆಂಕಿಬಿದ್ದು ಅದರಲ್ಲಿ ವಾಸವದತ್ತೆ ಸಿಕ್ಕಿ ಸುಟ್ಟುಹೋದಳು" ಬ್ರಹ್ಮಚಾರಿ ಹೇಳಿದನು.

ತಾನು ಜೀವಿಸಿರುವಾಗಲೇ ತನ್ನ ಸಾವಿನ ಸುದ್ದಿಯನ್ನು ಕೇಳಿದ ವಾಸವದತ್ತೆ 'ಮಂದಭಾಗಿನಿಯಾದ ನಾನು ಇನ್ನೂ ಜೀವಿಸಿರುವೆನಲ್ಲವೆ' ಎಂದುಕೊಂಡು ಸಂಕಟಕ್ಕೊಳಗಾದಳು.

ಯೌಗಂಧರಾಯಣನಿಗೆ ಮುಂದಿನ ಕಥೆಯನ್ನು ಕೇಳುವ ಆವಸರ. "ಆಮೇಲಾ ಮೇಲೆ !" ಎಂದನು.

"ವಾಸವದತ್ತೆಯನ್ನು ರಕ್ಷಿಸಲು ಯೌಗಂಧರಾಯಣನೆಂಬ ಮಂತ್ರಿಯೂ ಬೆಂಕಿಯಲ್ಲಿ ಬಿದ್ದು ಸುಟ್ಟುಹೋದನು. ಬೇಟೆಯಿಂದ ಹಿಂದಿರುಗಿದ ರಾಜನು ಪ್ರಿಯ ಭಾರ್ಯೆಯ ಮತ್ತು ಇಷ್ಟಮಂತ್ರಿಯ ವಿಯೋಗವನ್ನು ಸಹಿಸಲಾರದೆ ತಾನೂ ಅದೇ ಬೆಂಕಿಯಲ್ಲಿ ಬಿದ್ದು ಪ್ರಾಣಬಿಡಲು ಪ್ರಯತ್ನಿಸುತ್ತಿರುವಷ್ಟರಲ್ಲಿ ರುಮಣ್ವಂತನೇ ಮೊದಲಾದ ಮಂತ್ರಿಗಳು ಅವನನ್ನು ಬಹು ಪ್ರಯತ್ನದಿಂದ ತಡೆದರು—" ಎಂದು ಹೇಳಿ ಬ್ರಹ್ಮಚಾರಿ ನಿಲ್ಲಿಸಿದನು.

ಪತಿಗೊದಗಿದ ಶೋಕವನ್ನು ಕಲ್ಪಿಸಿಕೊಂಡು ವಾಸವದತ್ತೆ ಹನಿಗಣ್ಣಾದಳು.

"ಪ್ರಿಯೆಯ ದಗ್ಧಶೇಷವಾದ ಆಭರಣಗಳನ್ನು ಎದೆಗೊತ್ತಿಕೊಂಡು ವ್ಯಸನದಿಂದ ರಾಜನು ಮೂರ್ಛಿತನಾದನು" ಬ್ರಹ್ಮಚಾರಿ ಹೇಳಿದನು.

ಎಲ್ಲರೂ "ಹಾ ! ಕಷ್ಟ ಕಷ್ಟ" ಎಂದು ಉದ್ಗರಿಸಿದರು.

ಎಷ್ಟು ಪ್ರಯತ್ನಿಸಿದರೂ ವಾಸವದತ್ತೆಗೆ ದುಃಖವನ್ನು ತಡೆಯಲಾಗಲಿಲ್ಲ. ಅವಳ ಹೂಗೆನ್ನೆಯ ಮೇಲೆ ಕಂಬನಿ ಸಾಲಿಟ್ಟಿತು.

ಅದನ್ನು ನೋಡಿದ ಚೇಟಿ ಪದ್ಮಾವತಿಗೆ ಹೇಳಿಬಿಟ್ಟಳು. ಎಲ್ಲರ ದೃಷ್ಟಿಯೂ ವಾಸವದತ್ತೆಯ ಮೇಲೆ ನೆಟ್ಟಿತು. ವಾಸವದತ್ತೆ ತಲೆಬಾಗಿದಳು.

ಯೌಗಂಧರಾಯಣನು "ನನ್ನ ತಂಗಿ ಸ್ವಾಭಾವಿಕವಾಗಿ ದುಃಖವನ್ನು ತಡೆಯಲಾರಳು" ಎಂದು ಹೇಳದಿದ್ದರೆ ಎಂಥ ನಾಚಿಕೆಗೇಡು !

ವಾಸವದತ್ತೆಯ ಮಾತಂತಿರಲಿ ಅಲ್ಲಿದ್ದವರ ಹೃದಯವೂ ಕರಗಿತು. ಅವರು ಉದ್ವೇಗದಿಂದ ಮುಂದಿನ ಕಥೆಯನ್ನು ಕೇಳುತ್ತಿದ್ದರು.

ಬ್ರಹ್ಮಚಾರಿ ಅನಂತರ ಮೆಲ್ಲ ಮೆಲ್ಲನೆ ರಾಜನು ಚೇತರಿಸಿಕೊಂಡು ಎದ್ದನೆಂದಾಗ ಪದ್ಮಾವತಿಯಿಂದ ಉದ್ವೇಗವನ್ನು ತಡೆಯಲಾಗಲಿಲ್ಲ. "ದೈವಕೃಪೆಯಿಂದ ಹೇಗಾದರೂ ಬದುಕಿರುವನಷ್ಟೆ ? ಅವನು ಮೂರ್ಛಿತನಾದುದನ್ನು ಕೇಳಿ ನನ್ನ ಹೃದಯ ಶೂನ್ಯವಾಗಿತ್ತು" ಎನ್ನುವಷ್ಟು ಅವಳು ಎದೆಗರಗಿದ್ದಳು. ರಾಜನಿಗೆ ಮುಂದೇನಾಯಿತೊ ಎಂಬ ಕಳವಳದಿಂದ ಅವಳ ಮನಸ್ಸು ಪ್ರಕ್ಷುಬ್ಧ ಸರೋವರದಂತಾಗಿತ್ತು.

ಬಳಿಕ ಬ್ರಹ್ಮಚಾರಿ ಹೇಳಿದನು—"ಆಮೇಲೆ ಧೂಳಿಧೂಸರಿತವಾದ ದೇಹದೊಡನೆ ನೆಲದಿಂದ ಥಟ್ಟನೆ ಮೇಲೆದ್ದು ಪ್ರಿಯೆಯನ್ನು ಕೂಗಿ ಕರೆಯುತ್ತ ಬಹು ವಿಧವಾಗಿ ಗೋಳಾಡುತ್ತಿದ್ದನು. ಹೆಚ್ಚು ಮಾತಿನಿಂದೇನು ? ಸತಿವಿಯೋಗದಿಂದ

ಇಷ್ಟು ನೊಂದವರು ಇನ್ನೊಬ್ಬರಿಲ್ಲ ! ಆವನ ವಿರಹ ವ್ಯಥೆ ಚಕ್ರವಾಕ ಪಕ್ಷಿಗಳ ವಿರಹವನ್ನೂ ಮೀರಿಸಿತು. ಅವನು ಯಾವಳನ್ನು ಕುರಿತು ಹಂಬಲಿಸುತ್ತಿದ್ದಾನೋ ಆವಳೇ ಧನ್ಯೆ. ಬೆಂಕಿಯಲ್ಲಿ ಬೆಂದಳಿದರೂ ಅವಳು ನಿಶ್ಚಯವಾಗಿ ಸಾಯಲಿಲ್ಲ. ಅವಳ ಹೆಸರು ಚಿರಸ್ಥಾಯಿಯಾಯಿತು."

ಮುಂದೆ ರಾಜನೇನಾದನೋ ಎಂಬ ಕಾತರದಿಂದ ಯೌಗಂಧರಾಯಣನು "ರಾಜನನ್ನು ಸಮಾಧಾನಪಡಿಸಲು ಹತ್ತಿರದಲ್ಲಿ ಮಂತ್ರಿಗಳಾರೂ ಇರಲಿಲ್ಲವೆ ?" ಎಂದನು.

"ರುಮಣ್ವಂತ ಮಂತ್ರಿ ರಾಜನನ್ನು ಸಮಾಧಾನಪಡಿಸಲು ತನ್ನ ಕೈಲಾದ ಪ್ರಯತ್ನವನ್ನೆಲ್ಲಾ ಮಾಡುತ್ತಿರುವನು. ಮಂತ್ರಿಯ ದುಃಖವನ್ನು ತಾನೆ ಏನೆಂದು ಹೇಳಲಿ ! ರಾಜನಂತೆ ಮಂತ್ರಿಯೂ ದೀನವದನನಾಗಿ ನಿದ್ರಾಹಾರ, ಅಲಂಕಾರಗಳನ್ನು ತೊರೆದು ರಾಜನ ದುಃಖದಲ್ಲಿ ಪಾಲುಗೊಂಡು ಹಗಲಿರುಳೂ ರಾಜನನ್ನು ಉಪಚರಿಸುತ್ತಿರುವನು. ರಾಜನೇನಾದರೂ ಗತಿಸಿದರೆ ಮಂತ್ರಿಯೂ ಸಾಯುವುದು ನಿಶ್ಚಯ. ಆ ಗ್ರಾಮದಲ್ಲಿರುವವರೆಗೆ ರಾಜನು ಅವಳನ್ನೇ ನೆನೆದು ಹಂಬಲಿಸಿ ನರುಗುತ್ತಿದ್ದನು. ಮಂತ್ರಿಗಳು ಪ್ರಯತ್ನಪೂರ್ವಕವಾಗಿ ಅವನನ್ನು ಅಲ್ಲಿಂದ ಕರೆದುಕೊಂಡು ಹೋದರು. ಅವನು ಹೋದಮೇಲೆ ಆ ಗ್ರಾಮವು ಚಂದ್ರ ನಕ್ಷತ್ರಗಳಿಲ್ಲದ ಆಗಸದಂತೆ ಶೂನ್ಯವಾದುದರಿಂದ ಅಧ್ಯಯನವನ್ನು ನಿಲ್ಲಿಸಿ ನಾನೂ ಇತ್ತ ಬಂದೆ—" ಬ್ರಹ್ಮಚಾರಿ ಹೇಳಿ ಮುಗಿಸಿದನು.

ವತ್ಸರಾಜನ ಶೋಕ ತಾಪಸಿ, ಚೇಟಿ, ಪದ್ಮಾವತಿಯರ ಹೃದಯದ ಮೇಲೆ ಬಹಳ ಪರಿಣಾಮವನ್ನುಂಟುಮಾಡಿತು. ಅವರ ಹೆಂಗರುಳು ಸಹಾನುಭೂತಿಯಿಂದ ಮಿಡಿಯಿತು.

"ಆ ಗ್ರಾಮಕ್ಕೆ ಆಗಂತುಕನಾಗಿ ಹೋದ ಬ್ರಹ್ಮಚಾರಿಯೂ ಹೀಗೆ ಅವನನ್ನು ಪ್ರಶಂಸಿಸಬೇಕಾದರೆ ಆ ರಾಜನು ಬಹಳ ಗುಣಶಾಲಿಯಾಗಿರಬೇಕಲ್ಲವೆ ?" ಎಂದು ತಾಪಸಿ ಬಿಸುಸುಯ್ದರೆ, "ಅಂತಹ ಮಹಾನುಭಾವನನ್ನು ಬೇರಾವ ಪುಣ್ಯವತಿ ಕೈಹಿಡಿಯುವಳೋ !" ಎಂದು ಚೇಟಿ ಉದ್ಗರಿಸಿದಳು.

ಪದ್ಮಾವತಿ "ನನ್ನ ಹೃದಯವೂ ಇದನ್ನೇ ಆಲೋಚಿಸುತ್ತಿದೆ" ಎಂದುಕೊಂಡಳು, ತನ್ನಲ್ಲೇ.

ಅನಂತರ ಬ್ರಹ್ಮಚಾರಿ ಅವರ ಅಪ್ಪಣೆಯನ್ನು ಪಡೆದು ತನ್ನ ಪ್ರಯಾಣವನ್ನು ಮುಂದುವರಿಸಿದನು. ಯೌಗಂಧರಾಯಣನಿಗೆ ಬೇಕಾದ ಸುದ್ದಿಯೆಲ್ಲ ತಿಳಿದಂತಾ

ಯಿತು. ವಾಸವದತ್ತೆಗೆ ಸುರಕ್ಷಿತವಾದ ನೆಲೆಯನ್ನೂ ಕಲ್ಪಿಸಿದ್ದಾಗಿತ್ತು. ಇನ್ನು ಉದಯನ ಪದ್ಮಾವತಿಯರ ಕಲ್ಯಾಣದ ಏರ್ಪಾಡು ಮಾಡಬೇಕು. ಇದಿಷ್ಟಾದರೆ ಅವನ ಕಾರ್ಯಭಾರ ಮುಗಿಯಿತು.

ಆದ್ದರಿಂದ ಅವನು ಅವರೆಲ್ಲರ ಅಪ್ಪಣೆಯನ್ನು ಪಡೆದು ಮತ್ತೊಮ್ಮೆ ಎಂದಾದರೂ ಬರುವುದಾಗಿ ಹೇಳಿ ಅವರನ್ನು ಬೀಳ್ಕೊಂಡನು.

ಆಗಲೇ ಇಳಿಹೊತ್ತಾಗಿದ್ದುದರಿಂದ ಪದ್ಮಾವತಿ ಪರ್ಣಶಾಲೆಗೆ ಹೊರಟಳು. ಪದ್ಮಾವತಿ ವಾಸವದತ್ತೆಯರು ತಾಪಸಿಗೆ ನಮಸ್ಕರಿಸಿದರು. ತಾಪಸಿ "ಅನುರೂಪನಾದ ಪತಿಯನ್ನು ಹೊಂದು" ಎಂದು ಪದ್ಮಾವತಿಗೂ, "ಬೇಗನೆ ನಿನ್ನ ಪತಿಯೊಡನೆ ಸಮಾಗಮವಾಗಲಿ" ಎಂದು ವಾಸವದತ್ತೆಗೂ ಹರಸಿದಳು. ಬಳಿಕ ಅವರು ಅಲ್ಲಿಂದ ಪರ್ಣಶಾಲೆಗೆ ಹೋದರು.

ಪದ್ಮಾವತಿ ಆಶ್ರಮದಲ್ಲಿ ಆ ರಾತ್ರಿಯನ್ನು ಕಳೆದು ವಾಸವದತ್ತೆಯೊಡನೆ ಅರಮನೆಗೆ ಹೋದಳು. ವಾಸವದತ್ತೆ ತನ್ನವಳಾದಾಗಿನಿಂದ ಪದ್ಮಾವತಿಗೆ ಅವಳ ಮೇಲೆ ಬಹಳ ಮಮತೆಯುಂಟಾಗಿತ್ತು. ಅವಳ ಮನಸ್ಸು ಸ್ವಲ್ಪವೂ ನೋಯದಂತೆ ಅವಳು ನೋಡಿಕೊಳ್ಳುತ್ತಿದ್ದಳು, ಅವಳಿಗೆ ವಿಶೇಷ ಸಹಾನುಭೂತಿಯನ್ನು ತೋರುತ್ತಿದ್ದಳು. ಅವರಿಬ್ಬರು ಅಚ್ಚುಮೆಚ್ಚಿನ ಗೆಳತಿಯರಂತಾದರು. ತನ್ನ ಉದಾತ್ತ ಗುಣಗಳಿಂದ ವಾಸವದತ್ತೆ ಅವಳ ಆದರಕ್ಕೆ ಪಾತ್ರವಾದುದು ಆಶ್ಚರ್ಯವಲ್ಲ. ಅವರು ಪರಸ್ಪರ 'ಸಖಿ' ಎಂದು ಸಂಬೋಧಿಸುವಷ್ಟು ಅವರಲ್ಲಿ ಸ್ನೇಹ ಬೆಳೆಯಿತು. ಉಳಿದವರು ವಾಸವದತ್ತೆಯನ್ನು 'ಅವಂತಿಸುಂದರಿ'ಯೆಂದು ಕರೆಯುತ್ತಿದ್ದರು.

ಅರಮನೆಯ ಸೌಕರ್ಯ, ಸೌಲಭ್ಯಗಳಲ್ಲಿ, ಪದ್ಮಾವತಿಯ ಮಧುರ ಸಾನ್ನಿಧ್ಯದಲ್ಲಿ, ಯಾವ ಕೊರತೆ ಇಲ್ಲದಿದ್ದರೂ ವಾಸವದತ್ತೆಯ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಅವಳಿಗೆ ಹಗಲಿರುಳೂ ಪತಿಯ ಚಿಂತೆ. ಯೌಗಂಧರಾಯಣನು ಹೋದವನು ಇನ್ನೂ ಬಂದಿರಲಿಲ್ಲ. ವತ್ಸರಾಜನ ಮುಂದಿನ ಸ್ಥಿತಿಯನ್ನು ತಿಳಿಸಲು ಬ್ರಹ್ಮಚಾರಿಯಂತಹ ಬೇರಾವನೂ ಬರಲಿಲ್ಲ. ಬಾಹ್ಯ ಪ್ರಪಂಚದಿಂದ ಪ್ರತ್ಯೇಕವಾದ ಅಂತಃಪುರದ ಆವರಣದಲ್ಲಿ ಅವಳು ದಿನವನ್ನು ಎಣಿಸಬೇಕಾಯಿತು. ಅವಳು ಪದ್ಮಾವತಿಯ ಎದುರಿನಲ್ಲಿ ಇರುವತನಕ ಪ್ರಸನ್ನತೆಯ ಸೋಗುಹಾಕಿದರೂ ಒಬ್ಬೊಂಟಿಗಳಾದಾಗ ತನ್ನಿನಿಯನನ್ನು ಸ್ಮರಿಸುತ್ತಾ ತನ್ನ ಚಿತ್ತಭಿತ್ತಿಯಲ್ಲಿ ಅವನ ಮೂರ್ತಿಯನ್ನು ಚಿತ್ರಿಸಿಕೊಳ್ಳುತ್ತಾ ಅನನ್ಯಮನಸ್ಕಳಾಗಿ ಕುಳಿತುಬಿಡು

ತ್ತಿದ್ದಳು. ಹಿಂದೆ ಒಂದರೆಗಳಿಗೆಯೂ ಪತಿಯನ್ನು ಅಗಲದಿದ್ದ ಅವಳ ಹೃದಯವು ವಿರಹಾಗ್ನಿಯಿಂದ ಬೇಯುತ್ತಿತ್ತು. ಯೌಗಂಧರಾಯಣನ ಉಪಾಯ ಸಿದ್ಧಿಸಿ ತನ್ನ ಸ್ವಾಮಿಯನ್ನು ಮುಂದೆ ಕೂಡುವೆನೆಂಬ ಆಸೆಯಿಂದ ಅವಳು ಜೀವವನ್ನು ಹಿಡಿದಿದ್ದಳು. ಹೀಗೆ ಒಂದರ ಮೇಲೊಂದು ದಿನಗಳು ಉರುಳುತ್ತಿದ್ದುವು.

ವತ್ಸರಾಜನು ಲಾವಾಣಕದಲ್ಲಿ ಇರುವವರೆಗೆ ವಾಸವದತ್ತೆಯನ್ನು ನೆನೆಸಿಕೊಂಡು "ಇಲ್ಲಿ ನಾನು ಅವಳೊಡನೆ ನಗುತ್ತಿದ್ದೆ, ಇಲ್ಲಿ ಮಾತಾಡುತ್ತಿದ್ದೆ, ಅವಳೊಡನೆ ಇಲ್ಲಿ ಕುಳಿತಿದ್ದೆ, ಇಲ್ಲಿ ಮಲಗಿದ್ದೆ, ಇಲ್ಲಿ ಅವಳೊಡನೆ ಕೋಪಗೊಂಡಿದ್ದೆ" ಎಂದು ಬಹುವಿಧವಾಗಿ ಹಂಬಲಿಸುತ್ತಿದ್ದನು.

ಆ ಗ್ರಾಮದಿಂದ ತನ್ನ ರಾಜಧಾನಿಯಾದ ಕೌಶಾಂಬಿಗೆ ಹೋದಮೇಲೂ ಅವನ ಎದೆ ಹಗುರವಾಗಲಿಲ್ಲ. ಅವಳ ನೆನಪು ಅವನ ಹೃದಯದಲ್ಲಿ ಸದಾ ಹಸುರಾಗಿತ್ತು. ಅವಳಿಗೆ ವೀಣೆಯನ್ನು ಕಲಿಸುತ್ತಿದ್ದ ಮತ್ತು ಅವನಿಗೆ ಪ್ರಿಯವಾಗಿದ್ದ ಘೋಷವತಿ ವೀಣೆಯೂ ಅವಳೊಡನೆಯೇ ಕಳೆದುಹೋಗಿತ್ತು. ರುಮಣ್ವಂತನ ಸಮಾಧಾನೋಕ್ತಿಯಿಂದ ಅವನು ಹೇಗೋ ಜೀವ ಹಿಡಿದಿದ್ದನು. ಅವನಿಗೆ ಅರಸುತನ, ಅರಮನೆ ಯಾವುವೂ ಬೇಡವಾಗಿದ್ದುವು.

ಪದ್ಮಾವತಿಯ ಮುಗ್ಧ ಮನಸ್ಸು ಉದಯನನ ದುಃಖಕಥೆಯನ್ನು ಕೇಳಿದಾಗಿನಿಂದ ಅವನ ಬಗ್ಗೆ ಮರುಕವನ್ನು ತಾಳಿತ್ತು. ಅವನ ಉದಾತ್ತಗುಣ, ಪ್ರಣಯ ಸ್ವಭಾವಗಳಿಗೆ ಅವಳು ಮಾರುಹೋಗಿದ್ದಳು. ದಿನಗಳೆದಂತೆ ಅವಳಿಗೆ ಅವನ ಮೇಲೆ ಪ್ರೇಮ ಹುಟ್ಟಿತು. ಅವನ ಕೈಹಿಡಿಯುವ ಪುಣ್ಯ ತನಗೇಕೆ ಬರಬಾರದು ಎಂದು ಯೋಚಿಸುತ್ತಿದ್ದಳು. ಅವಳ ಗುಪ್ತ ಅನುರಾಗ ವ್ಯಕ್ತವಾಗುವಷ್ಟರ ಮಟ್ಟಿಗೆ ಅವಳ ನಡೆನುಡಿ ಬದಲಾಯಿಸಿತು. ಸೂಕ್ಷ್ಮಮತಿಯಾದ ಚೇಟಿಗೆ ಅದು ತಿಳಿಯದಿರಲಿಲ್ಲ.

ಒಂದು ದಿನ ವಾಸವದತ್ತೆ, ಚೇಟಿಯರೊಡನೆ ಪದ್ಮಾವತಿ ಮಾಧವೀಲತೆಯ ಮಂಟಪದ ಪಕ್ಕದಲ್ಲಿ ಚೆಂಡಾಡುತ್ತಿದ್ದಳು. ಆಡಿ ಸಾಕಾದುದರಿಂದ ಆಟವನ್ನು ನಿಲ್ಲಿಸಿ ಅವರು ಮಾತಾಡುತ್ತಿದ್ದಾಗ ವಾಸವದತ್ತೆ ಪದ್ಮಾವತಿಯನ್ನು "ಮಹಾಸೇನನ ಸೊಸೆ" ಎಂದು ಸರಸವಾಗಿ ಸಂಬೋಧಿಸಿದಳು.

ಚೇಟಿ "ನಮ್ಮ ರಾಜಕುಮಾರಿಗೆ ಆ ಸಂಬಂಧ ಇಷ್ಟವಿಲ್ಲ, ವತ್ಸರಾಜನ ಗುಣಾತಿಶಯಗಳನ್ನು ಕೇಳಿ ಅವನಲ್ಲಿ ಅನುರಕ್ತಳಾಗಿದ್ದಾಳೆ" ಎಂದಳು. ಇದರಿಂದ ವಾಸವದತ್ತೆಗೆ ಸಂತೋಷವಾಗದಿರುವುದೆ!

ಚೇಟಿ "ಒಂದು ವೇಳೆ ಅವನು ಕುರೂಪಿಯಾಗಿದ್ದರೆ ಏನು ಮಾಡುವೆ?" ಎಂದು ಪದ್ಮಾವತಿಯನ್ನು ಕೇಳಿದಳು.

ವಾಸವದತ್ತೆ ಸುಮ್ಮನಿರದೆ ಅವನು ಬಹು ರೂಪವಂತನೆಂದು ಶ್ಲಾಘಿಸಿದಳು.

ತಕ್ಷಣ ಪದ್ಮಾವತಿ "ನಿನಗೆ ಹೇಗೆ ಗೊತ್ತು?" ಎಂದು ಕೇಳಲು "ಉಜ್ಜಯಿನಿ ಪಟ್ಟಣದವರು ಹಾಗೆಂದು ಮಾತನಾಡುವುದನ್ನು ಕೇಳಿದ್ದೆ" ಎಂದು ಚಮತ್ಕಾರವಾಗಿ ಉತ್ತರಿಸಿದಳು.

ಅಷ್ಟರಲ್ಲಿ ದಾದಿಯೊಬ್ಬಳು ಸಡಗರದಿಂದ ಅಲ್ಲಿಗೆ ಓಡಿಬಂದು "ರಾಜಪುತ್ರಿ, ನಿನ್ನನ್ನು ವತ್ಸರಾಜ ಉದಯನನಿಗೆ ಆಗಲೇ ಕೊಟ್ಟಾಯಿತು" ಎಂದು ಶುಭವಾರ್ತೆಯನ್ನು ಬಿನ್ನವಿಸಿದಳು.

ಉದಯನನ ಹೆಸರು ಕೇಳಿದ ಕೂಡಲೆ ವಾಸವದತ್ತೆಗೆ ಅವನ ಕ್ಷೇಮದ ಚಿಂತೆ. "ಹಾಗಾದರೆ ಆ ಮಹಾರಾಜನು ಕ್ಷೇಮದಿಂದಿರುವನೆ?" ಎಂದು ಕೇಳಿಬಿಟ್ಟಳು. ಬಾಯಿ ತಡೆಯಲಾರದೆ.

ದಾದಿ ಹೇಳಿದಳು:—"ಅವನು ಕ್ಷೇಮದಿಂದ ಬಂದುದು ಮಾತ್ರವಲ್ಲ, ನಮ್ಮ ರಾಜಪುತ್ರಿಯನ್ನು ಸ್ವೀಕರಿಸಿಯೂ ಆಯಿತು."

ದಾದಿಯ ಮಾತು ದಿಟವಾಗಿತ್ತು. ಪ್ರಾಪ್ತವಯಸ್ಕಳಾದ ಮಗಳ ಮದುವೆಯನ್ನು ಮಾಡಲು ಪದ್ಮಾವತಿಯ ತಾಯಿತಂದೆಯರು ಯೋಚಿಸುತ್ತಿದ್ದರು. ಮಗಧ ದೇಶಕ್ಕೆ ಬಂದ ಉದಯನನನ್ನು ರಾಜನು ತನ್ನ ಮಗಳನ್ನು ಮದುವೆ ಮಾಡಿಕೊಳ್ಳಲು ಕೇಳಿಕೊಂಡನು. ಅವನ ಮಾತನ್ನು ಮೀರಲಾರದೆ ಉದಯನ ಒಪ್ಪಿಕೊಂಡನು. ಕೂಡಲೆ ಮದುವೆಯನ್ನು ಮಾಡಲು ನಿಶ್ಚಯಿಸಿದರು.

ಉದ್ಯಾನವನದಲ್ಲಿದ್ದ ವಧುವನ್ನು ಕರೆತರಲು ದಾದಿಯನ್ನು ಕಳುಹಿಸಲಾಯಿತು. ವತ್ಸರಾಜನು ತನ್ನನ್ನು ಇಷ್ಟು ಬೇಗ ಮರೆತು ಪುನರ್ವಿವಾಹಕ್ಕೆ ಒಪ್ಪಿದನಲ್ಲ ಎಂದುಕೊಂಡು "ಅಹಾ! ಏನನ್ಯಾಯವಿದು. ತನ್ನ ಪ್ರಥಮ ಪತ್ನಿಗಾಗಿ ಅಷ್ಟೊಂದು ಪರಿತಪಿಸುತ್ತಿದ್ದ ರಾಜನು ಅವಳ ವಿಷಯದಲ್ಲಿ ಹೀಗೆ ಉದಾಸೀನನಾಗಬಹುದೆ!" ಎಂದು ವಾಸವದತ್ತೆ ಆಕ್ಷೇಪಿಸಿದಳು.

ದಾದಿ "ಮಹಾಪುರುಷರ ಸ್ವಭಾವವೇ ಹೀಗೆ. ಅವರ ಮನಸ್ಸು ಬಹು ಸುಲಭವಾಗಿ ಶಾಸ್ತ್ರಚೋದನೆಗಳಿಗೂ ಸ್ನೇಹಿತರ ಹಿತೋಪದೇಶಕ್ಕೂ ಬಲು ಬೇಗ ಈಡಾಗುತ್ತದೆ. ಕಾರ್ಯಾಂತರದ ಮೇಲೆ ಮಗಧ ದೇಶಕ್ಕೆ ಬಂದ ವತ್ಸರಾಜನ ಕುಲ,

ರೂಪು, ವಯಸ್ಸು, ಜ್ಞಾನಗಳನ್ನು ನೋಡಿ ನಮ್ಮ ಮಹಾರಾಜನೇ ಮಗಳನ್ನು ಪಾಗ್ದಾನ ಮಾಡಿದನು" ಎಂದು ಹೇಳಲು ವಾಸವದತ್ತೆಗೆ ಸಮಾಧಾನವಾಯಿತು, ತನ್ನ ಪತಿಯಲ್ಲಿ ತಪ್ಪೆಣಿಸುವ ಹಾಗಿಲ್ಲವೆಂದು.

ಚೇಟಿಯೊಬ್ಬಳು ಸಂಭ್ರಮದಿಂದ ಬಂದು "ಇದೇ ಒಳ್ಳೆಯ ಮುಹೂರ್ತವಂತೆ ಈಗಲೇ ವಿವಾಹಮಹೋತ್ಸವ ನಡೆದುಹೋಗಬೇಕಂತೆ" ಎಂದು ಅವಸರಿಸಿ. ಅವರನ್ನು ತ್ವರೆಯಿಂದ ಅರಮನೆಗೆ ಕರೆದೊಯ್ದಳು.

ಮದುವೆಯ ಸಡಗರದಿಂದ ತುಂಬಿದ್ದ ಅರಮನೆಯಲ್ಲಿ ಪದ್ಮಾವತಿಯನ್ನು ಬಿಟ್ಟು ವಾಸವದತ್ತೆಯೊಬ್ಬಳೇ ಪ್ರಮದವನಕ್ಕೆ ಹೋದಳು. ಅಲ್ಲಿ ಗಂಧಫಲೀ ವೃಕ್ಷದ ಕಲ್ಲುಕಟ್ಟೆಯ ಮೇಲೆ ಕುಳಿತು ಮಂಜು ಮುಚ್ಚಿದ ಚಂದ್ರಲೇಖೆಯಂತೆ ಚಿಂತಾಮಗ್ನಳಾಗಿದ್ದಳು.

ಪದ್ಮಾವತಿ ತನ್ನ ಸವತಿಯಾಗಲೆಂದು ಅವಳೇ ಒಪ್ಪಿದ್ದಳು. ಆದರೆ ಅದನ್ನು ನೋಡಬೇಕಾದ ಸಮಯ ಬಂದಾಗ ಅವಳ ಎದೆ ಬಿರಿಯಿತು. ಸವತಿ ಬರುವ ಳಿಂದಲ್ಲ. ತಾನು ಹೀಗೆ ವೇಷಮರೆಸಿಕೊಂಡು ಅನಾಮಧೇಯಳಾಗಿ ಇರುವ ಸ್ಥಿತಿ ಬಂತಲ್ಲ ಎಂಬ ಸಂಕಟದಿಂದ. ಮದುವೆಯ ಮಂಟಪದಲ್ಲಿ ಆ ಸಂಭ್ರಮ ಸಂತೋಷಗಳ ನಡುವೆ ತನ್ನ ದುಗುಡದ ಮುಖವನ್ನು ಹೊತ್ತು ಅವಳಿಗೆ ನಿಲ್ಲಲಾಗಲಿಲ್ಲ. ಅವಳು ತನ್ನ ಒಡಲುರಿಯನ್ನು ಯಾರಿಗೂ ಹೇಳಿಕೊಳ್ಳುವಂತಿಲ್ಲ. ಕಲ್ಲುಕಟ್ಟೆಯ ಮೇಲೆ ಕುಳಿತು ಅವಳು ಮನಸಾರೆ ಅತ್ತುಬಿಟ್ಟಳು.

ಎಷ್ಟು ಅತ್ತರೂ ಅವಳ ಕಣ್ಣೀರು ಬತ್ತದು. "ಅಹಾ! ಲೋಕದಲ್ಲಿ ಚಕ್ರವಾಕ ಸ್ತ್ರೀಯೇ ಧನ್ಯೆಯಲ್ಲವೆ! ವಿಯೋಗವ್ಯಥೆಯನ್ನು ತಾಳಲಾರದೆ ಅದು ಬೇಗ ಸಾಯುವುದಲ್ಲವೆ! ಅಯ್ಯೋ ಭಾಗ್ಯಹೀನಳಾದ ನಾನು ಸಾಯುವುದಕ್ಕೂ ಇಲ್ಲವಾಯಿತು! ಆರ್ಯಪುತ್ರನನ್ನು ಎಂದಾದರೂ ನೋಡುವೆನೆಂದು ಜೀವವನ್ನು ಹಿಡಿದಿದ್ದೇನಲ್ಲವೆ!" ಎಂದು ತುಂಬಾ ಗೋಳಾಡುತ್ತಿದ್ದಳು.

ಅತ್ತ ಅರಮನೆಯಲ್ಲಾದರೂ ಲಗ್ನ ಶಾಸ್ತ್ರಗಳು ನಿರ್ವಿಘ್ನವಾಗಿ ನಡೆಯುತ್ತಿದ್ದುವು, ಮಂಗಳವಾದ್ಯಗಳು ಭೋರ್ಗರೆಯುತ್ತಿದ್ದುವು. ಒಬ್ಬಳೇ ಕುಳಿತು ಕಣ್ಣೀರಿಡುವುದಕ್ಕೂ ವಾಸವದತ್ತೆಗೆ ಅಡ್ಡಿಯಾಯಿತು.

ಚೇಟಿಯೊಬ್ಬಳು ಪುಷ್ಪಗಳೊಡನೆ ವಾಸವದತ್ತೆಯನ್ನು ಹುಡುಕುತ್ತಾ ಅವಸರದಿಂದ ಅಲ್ಲಿಗೇ ಬರಬೇಕೆ! ಮಹಾರಾಣಿ ವಾಸವದತ್ತೆಯ ಕೈಯಿಂದ ವರಣಮಾಲೆಯನ್ನು ಕಟ್ಟಿಸಿ ತರಲು ಅವಳನ್ನು ಅಟ್ಟಿದ್ದಳು. ವಾಸವದತ್ತೆ ಮಾಲೆಯನ್ನು ಚೆನ್ನಾಗಿ ಕಟ್ಟುತ್ತಿದ್ದುದೇ ಅದಕ್ಕೆ ಕಾರಣವಾಗಿತ್ತು.

ವಾಸವದತ್ತೆಗೆ ಹುಣ್ಣಿನ ಮೇಲೆ ಬರೆ ಹಾಕಿದಂತಾಯಿತು. "ವರಣ ಮಾಲೆಯನ್ನು ನಾನೇ ಕಟ್ಟಬೇಕಾಗಿ ಬಂತೆ! ಯಾವ ದೇವತೆಗೂ ನನ್ನಲ್ಲಿ ಕರುಣೆಯಿಲ್ಲವಾಯಿತೆ" ಎಂದು ಮೌನವಾಗಿ ವ್ಯಥೆಪಟ್ಟಳು.

ಚೇಟಿ "ಬೇಗ ಕಟ್ಟಿಕೊಡು, ಹೊತ್ತಾಯಿತು" ಎಂದು ಅವಸರಿಸುತ್ತಿದ್ದಳು. ಆದರೂ ವಾಸವದತ್ತೆ "ನೀನು ವರನನ್ನು ನೋಡಿದೆಯ? ಹೇಗಿದ್ದಾನೆ?" ಎಂದು ಕೇಳಿದಳು.

"ಇದುವರೆಗೂ ಅಂಥವನನ್ನು ನೋಡಿಲ್ಲ: ಧನುರ್ಬಾಣಗಳಿಲ್ಲದ ಕಾಮದೇವನೆಂದೇ ಹೇಳಬಹುದು" ಚೇಟಿ ಉತ್ತರಿಸಿದಳು.

ಹೂಗಳೊಡನಿದ್ದ 'ಅವಿಧವಾಕರಣ' ಮೂಲಿಕೆಯನ್ನು ಸೇರಿಸಿ 'ಸಪತ್ನೀಮರ್ದನ' ಮೂಲಿಕೆಯನ್ನು ಸೇರಿಸದೆ "ಮೊದಲನೆಯ ಹೆಂಡತಿ ಇದ್ದರಲ್ಲವೆ ಸಪತ್ನೀಮರ್ದನದಿಂದ ಪ್ರಯೋಜನ" ಎಂದು ಉಪಾಯವಾಗಿ ಹೇಳಿ ವಾಸವದತ್ತೆ ಮಾಲೆಯನ್ನು ಕಟ್ಟಿ ಮುಗಿಸಿದಳು. ಅದನ್ನು ತೆಗೆದುಕೊಂಡು ಕೂಡಲೆ ಚೇಟಿ ಕಣ್ಮರೆಯಾಗಲು ಹಾಸಿನಲ್ಲಾದರೂ ಮಲಗಿ ತನ್ನ ದುಃಖವನ್ನು ಸಮಾಧಾನ ಮಾಡಿಕೊಳ್ಳಬೇಕೆಂದು ವಾಸವದತ್ತೆಯೂ ಅಲ್ಲಿಂದ ಎದ್ದು ಅರಮನೆಗೆ ಹೋದಳು.

ಪದ್ಮಾವತಿ ವತ್ಸರಾಜರ ಮದುವೆಯು ನಿರ್ವಿಘ್ನವಾಗಿ ಮುಗಿದುಹೋಯಿತು. ಬಂಧುಬಳಗದವರು, ಆಶ್ರಿತಪಾಲಿತರೆಲ್ಲ ಸಂತೋಷಪಟ್ಟರು. ಮಾವನ ಪ್ರೀತಿಗೆ ಕಟ್ಟುಬಿದ್ದು ವತ್ಸರಾಜನು ಮಗಧ ದೇಶದಲ್ಲಿ ಕೆಲವು ದಿನ ತಂಗಿದನು. ಅವನಿಗೆ ಕಾಲ ಕಳೆಯಲು ಗೆಳೆಯನಾದ ವಿದೂಷಕನೂ ಅವನ ಮನಸ್ಸನ್ನು ರಮಿಸಲು ರೂಪವತಿಯೂ ಗುಣವತಿಯೂ ಆದ ಪದ್ಮಾವತಿಯೂ ಇದ್ದರು.

ಆದರೂ ಉದಯನನು ಸಂತೋಷದಿಂದಿರಲಿಲ್ಲ. ಅವನ ಹೃದಯ ವಾಸವದತ್ತೆಗೆ ಮೀಸಲಾಗಿತ್ತು. ಎರಡನೆಯ ಮದುವೆಯಾದರೂ ಪ್ರಥಮ ಭಾರ್ಯೆಯ ಮೇಲಿನ ಅವನ ಪ್ರೇಮ ಕುಗ್ಗಲಿಲ್ಲ. ಹಗಲಿರುಳೂ ಅವಳ ನೆನಪು ಅವನನ್ನು ಕಾಡುತ್ತಿತ್ತು. ಅವನಿಗೆ ತನ್ನ ಖಿನ್ನ ಮುಖವನ್ನು ನೋಡಿ ಪದ್ಮಾವತಿ ಏನೆಂದುಕೊಂಡಾಳೆಂಬ ಸಂಕೋಚ ಬೇರೆ! ಅವಳೆದುರಿನಲ್ಲಿ ಗೆಲುವಿನಿಂದಿರುವಂತೆ ತೋರಿಕೊಂಡರೂ ಅವಳಿಲ್ಲದಿದ್ದಾಗ ವಾಸವದತ್ತೆಯನ್ನು ನೆನೆದುಕೊಂಡು ಅವನು ಶೋಕಿಸುತ್ತಿದ್ದನು. ಮಾವನ ಮನೆಯ ಊಟ ಉಪಚಾರಗಳು ಅಳಿಯನಿಗೂ ಅವನ ಗೆಳೆಯನಿಗೂ ಮಿತಿಮೀರಿದ್ದುವು. ಗೆಳೆಯನಿಗಂತೂ ಹೊಟ್ಟೆ ಬಿರಿಯ ನುಂಗಿದುದರಿಂದ ಕೋಗಿಲೆಯ ಕಣ್ಣಿನಂತೆ ಅವನ ಹೊಟ್ಟೆ ತೊಳಸತೊಡಗಿತ್ತು.

ಪದ್ಮಾವತಿ ಯಾವ ಕಪಟವನ್ನೂ ಅರಿಯದ ಮುಗ್ಧೆ. ಮೊದಲೇ ವತ್ಸರಾಜನ ಪ್ರಣಯಸ್ವಭಾವವನ್ನು ತಿಳಿದಿದ್ದ ಅವಳಿಗೆ ಪ್ರಥಮ ಭಾರ್ಯಾ ಪ್ರೇಮಿಯಾದ ಪ್ರಿಯನಲ್ಲಿ ಮುನಿಸು, ಸಿಟ್ಟಿಗೆ ಬದಲು ಸಹಾನುಭೂತಿಯುಂಟಾಯಿತು. ಅವನ ಮನಸ್ಸನ್ನು ಪ್ರಸನ್ನಗೊಳಿಸಲು ಅವಳು ಏನು ಮಾಡಲೂ ಸಿದ್ಧಳು.

ಶರತ್ಕಾಲದ ಒಂದು ಬೇಗೆ. ಪದ್ಮಾವತಿ ಶೇಫಾಲಿಕಾಲತೆಯು ಹೂ ಬಿಟ್ಟಿದೆಯೊ ಇಲ್ಲವೊ ನೋಡಬೇಕೆಂದು ವಾಸವದತ್ತೆ ಚೇಟಿಯರೊಡನೆ ಉದ್ಯಾನವನಕ್ಕೆ ಹೋದಳು. ಹೂ ಬಿಟ್ಟು ಒಂದು ವಿಶೇಷ ಚೆಲುವಿನಿಂದ ಮೈಯೆಲ್ಲಾ ಕಣ್ಣಿನಂತೆ ಹೊಳೆಯುವ ಆ ಬಳ್ಳಿಯನ್ನು ನೋಡುತ್ತಾ ಅವರು ಒಂದು ಶಿಲಾತಲದ ಮೇಲೆ ಕುಳಿತುಕೊಂಡರು.

ಚೇಟಿ ಕೆಲವು ಶೇಫಾಲಿಕಾ ಪುಷ್ಪಗಳನ್ನು ಕಿತ್ತು ತಂದು ಒಡತಿಗೆ ಕೊಟ್ಟು "ಇನ್ನಷ್ಟು ಹೂವನ್ನು ಕಿತ್ತು ತರಲೆ?" ಎಂದು ಕೇಳಿದಳು.

ಪದ್ಮಾವತಿ "ಇಲ್ಲಿಗೆ ನನ್ನ ಪ್ರಿಯನು ಬಂದಾಗ ಆ ಪುಷ್ಪಸಂಪತ್ತನ್ನು ನೋಡಿ ಸಂತೋಷಪಟ್ಟರೆ ಅದೇ ನನಗೊಂದು ಬಹುಮಾನವಲ್ಲವೆ? ಬೇಡ" ಎಂದಳು.

ಹೊಸದಾಗಿ ಮದುವೆಯಾದ ಹೆಣ್ಣಿನ ದಾಂಪತ್ಯ ಸುಖವನ್ನು ಏಕಾಂತದಲ್ಲಿ ಕುಳಿತು ಕೇಳುವ ಅವಳ ಜೊತೆಗಾತಿಯರಂತೆ ಯಾರೂ ಸುಳಿಯದ ಅಂತಃಪುರದ ಆ ಉದ್ಯಾನವಲ್ಲಿ, ಅವರು ಮೂವರೂ ಮಾತಿಗೆ ಪ್ರಾರಂಭಿಸಿದರು.

ವಾಸವದತ್ತೆ "ಸಖಿ, ನಿನಗೆ ಈಗಾಗಲೇ ಕಾಂತನಲ್ಲಿ ಅಷ್ಟೊಂದು ಪ್ರೇಮವೆ?" ಕುತೂಹಲದಿಂದ ಪದ್ಮಾವತಿಯನ್ನು ಕೇಳಿದಳು.

ಹೊರಗಿನವರು ಯಾರೂ ಇಲ್ಲವೆಂಬ ಧೈರ್ಯದಿಂದ ನಾಚಿಕೆ ಬೆರೆತ ದನಿಯಲ್ಲಿ ಪದ್ಮಾವತಿ "ಆರ್ಯೆ, ಏತಕ್ಕೋ ಕಾಣೆ, ಅವನನ್ನು ಸ್ವಲ್ಪ ಹೊತ್ತು ಅಗಲಿದರೂ ಮನಸ್ಸು ತವಕಗೊಳ್ಳುವುದು" ಎಂದು ಹೇಳಿದಳು. ತನ್ನ ಕಾಂತನ ಮೇಲೆ ಅವಳಿಗೆ ಮೊದಲಿನಿಂದಲೂ ಗಾಢವಾದ ಪ್ರೇಮ ಬೆಳೆದಿತ್ತು.

ವತ್ಸರಾಜನೂ ಅಷ್ಟೆ. ತನ್ನ ದುಃಖ ಎಷ್ಟಿದ್ದರೂ ಅವಳಿಗೆ ತೋರಗೊಡದೆ ಅವಳಲ್ಲಿ ಪ್ರೀತಿಯನ್ನೇ ತೋರಿಸುತ್ತಿದ್ದನು. ಆದ್ದರಿಂದ ಅವಳಿಗೆ ರಾಜನು ತನ್ನಲ್ಲಿ ಎಷ್ಟು ಪ್ರೀತಿಯನ್ನು ತೋರಿಸುತ್ತಿದ್ದಾನೊ ಅಷ್ಟೇ ಪ್ರೀತಿಯನ್ನು ಪ್ರಥಮ ಪತ್ನಿಯಲ್ಲಿಯೂ ಅವನು ತೋರಿಸುತ್ತಿದ್ದಿರಬಹುದೆ ಎಂಬ ಸಂದೇಹ.

ಅದಕ್ಕೆ ವಾಸವದತ್ತೆ "ಅವಳನ್ನು ನಿನಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದನು. ಪ್ರೇಮವು ಅಲ್ಪವಾಗಿದ್ದರೆ ಅವಳನ್ನು ಕುರಿತು ಅಷ್ಟು ದುಃಖಿಸುತ್ತಿದ್ದನೇನು!" ಎಂದು ಹೇಳಿದಳು.

"ಹಾಗಾದರೆ ನನಗೂ ವೀಣೆಯನ್ನು ಕಲಿಸಿಕೊಡು ಎಂದು ನಿನ್ನ ಕಾಂತನನ್ನು ನೀನೇಕೆ ಕೇಳಬಾರದು ?" ಎಂದು ಚೇಟಿ ಪ್ರಶ್ನಿಸಿದಳು.

"ನಾನಾಗಲೆ ಕೇಳಿದೆ. ಅವನು ಮಾತನಾಡದೆ ದೊಡ್ಡದಾಗಿ ನಿಟ್ಟುಸಿರು ಬಿಟ್ಟು ಸುಮ್ಮನಾದನು" ಎಂದು ಪದ್ಮಾವತಿ ಬಿಸುಸುಯ್ದು ಉತ್ತರಿಸಿದಳು.

ಮತ್ತೊಂದು ಕಡೆಯಿಂದ ವತ್ಸರಾಜ ವಿದೂಷಕರು ಆ ಉದ್ಯಾನವನದಲ್ಲಿ ಬರುತ್ತಿದ್ದರು. ಬಂದುಗೆಯ ಹೂಗಳು ಸುರಿದು ಅಲಂಕೃತವಾದ ಆ ವನಪ್ರದೇಶದಲ್ಲಿ ನಡೆಯುತ್ತಿದ್ದಂತೆ ರಾಜನು ಕಾಮವಶನಾಗಿ "ಅಂದು ಉಜ್ಜಯಿನಿ ಪಟ್ಟಣದಿಂದ ವಾಸವದತ್ತೆಯೊಡನೆ ನಾನು ಪ್ರಯಾಣ ಮಾಡುತ್ತಿರುವಾಗ ಕಾಮನು ಬಿಟ್ಟ ಬಾಣಗಳು ನನ್ನ ಎದೆಯಲ್ಲಿ ಇನ್ನೂ ನಾಟಿವೆ. ಈಗ ಮತ್ತೊಂದು ಬಾಣವನ್ನು ಬಿಟ್ಟು ನನ್ನನ್ನು ವಶಪಡಿಸಿಕೊಳ್ಳಬೇಕಾದರೆ ಪಂಚಬಾಣನಿಗೆ ಆರು ಬಾಣಗಳು ಹೇಗೆ ಬಂದುವು ?" ಎಂದು ಆಶ್ಚರ್ಯದಿಂದ ಉದ್ಗರಿಸಿದನು.

ಅವನ ಮನಸ್ಸನ್ನು ಬೇರೆ ಕಡೆಗೆ ಸೆಳೆಯಲೆಂದು ವಿದೂಷಕನು ನಿರ್ಮಲವಾದ ಆಕಾಶದಲ್ಲಿ ಸಾಲಾಗಿ ಹಾರಿಹೋಗುವ ಸಾರಸಪಕ್ಷಿಗಳನ್ನು ತೋರಿಸಿದನು.

ವತ್ಸರಾಜನು ಅವುಗಳನ್ನು ನೋಡಿ ಬಣ್ಣಿಸುತ್ತಾ ಪದ್ಮಾವತಿಯಿದ್ದ ಕಡೆಯೇ ಬರುತ್ತಿದ್ದನು. ಅವರನ್ನು ಕಂಡು ಅಲ್ಲಿರುವುದು ಸರಿಯಲ್ಲವೆಂದುಕೊಂಡು ಪದ್ಮಾವತಿ ವಾಸವದತ್ತೆ ಚೇಟಿಯರೊಡನೆ ಸಮೀಪದಲ್ಲಿದ್ದ ಮಾಧವೀಮಂಟಪದೊಳಕ್ಕೆ ಶಿಲಾತಲದಿಂದ ಎದ್ದು ಹೋದಳು.

ಅದೇ ಹೂವು ಕಿತ್ತಿದ್ದ ಶೇಫಾಲಿಕಾ ಲತೆಯ ಕುಡಿಯನ್ನು ನೋಡಿ ಪದ್ಮಾವತಿ ಅಲ್ಲಿಗೆ ಬಂದು ಹೋಗಿರಬೇಕೆಂದು ಊಹಿಸಿ ಅಲ್ಲಿದ್ದ ಶಿಲಾತಲದ ಮೇಲೆ ರಾಜವಿದೂಷಕರು ಕುಳಿತುಕೊಂಡರು. ಆ ಲತೆಯ ಪುಷ್ಪ ವೈಚಿತ್ರ್ಯವನ್ನು ಕಂಡು ಅವರಿಗೆ ಆನಂದವಾಯಿತು. ಆ ಶರತ್ಕಾಲದ ಬಿಸಿಲಿಗೆ ಕಾದ ಕಲ್ಲಿನ ಮೇಲೆ ಅವರು ಹೆಚ್ಚು ಹೊತ್ತು ಕೂರಲಾಗಲಿಲ್ಲ. ಆದ್ದರಿಂದ ಅವರು ಅಲ್ಲಿಂದ ಮಾಧವೀಮಂಟಪದ ನೆರಳಿಗೆ ಹೊರಟರು.

ರಾಜನು ಒಳಕ್ಕೆಲ್ಲಿ ಬಂದುಬಿಡುವನೋ ಎಂದು ಪದ್ಮಾವತಿಗೆ ಕಳವಳವಾಯಿತು. ಚೇಟಿ ತಾವಿರುವಲ್ಲಿಗೆ ರಾಜನು ಬಾರದಿರುವಂತೆ ಒಂದು ಉಪಾಯ ಮಾಡಿದಳು. ದುಂಬಿಗಳಿಂದ ತುಂಬಿ ತೂಗಾಡುತ್ತಿದ್ದ ಬಳ್ಳಿಯನ್ನು ಅವಳು ಅಲ್ಲಾಡಿಸಿಬಿಟ್ಟಳು. ಮುಂದೆ ಬರುತ್ತಿದ್ದ ವಿದೂಷಕನಿಗೆ ದುಂಬಿಗಳು ಮುತ್ತಿಕೊಂಡವು. ರಾಜನು ಅವನಿಗೆ ಹೆದರದಿರುವಂತೆ ಹೇಳಿ "ದುಂಬಿಗಳನ್ನು ಓಡಿಸುವುದು ಸರಿಯಲ್ಲ. ಮಧುಪಾನ ಮಾಡಿ ತಮ್ಮ ಸತಿಯರೊಡನೆ ನಲಿಯುವ ದುಂಬಿಗಳು

ನನ್ನಂತೆ ವಿರಹವ್ಯಥೆಯನ್ನು ಅನುಭವಿಸಬೇಕಾಗುತ್ತದೆಯಲ್ಲವೆ !" ಎಂದು ಹೇಳಿದನು. ಬಳಿಕ ಅವರಿಬ್ಬರು ಮಂಟಪದ ಹೊರಗೆ ಕುಳಿತರು.

ಮಂಟಪದೊಳಗೆ ಪದ್ಮಾವತಿ, ವಾಸವದತ್ತೆ, ಚೇಟಿಯರಿದ್ದರು. ತನ್ನ ಪತಿಯ ಕಂಪನ ದೇಹವನ್ನು ಹತ್ತಿರದಿಂದ ನೋಡಿ ವಾಸವದತ್ತೆಗೆ ಆನಂದಾಶ್ರುಗಳು ಉದುರಿದುವು. ಅದನ್ನು ಕಂಡು ಚೇಟಿ ಕಾರಣವನ್ನು ಕೇಳಲು, ದುಂಬಿಗಳ ಹಾರಾಟದಿಂದ ಕಣ್ಣಿನಲ್ಲಿ ಹೂವಿನ ಪರಾಗ ಬಿದ್ದು ಕಣ್ಣೀರು ಬಂದಿತೆಂದು ವಾಸವದತ್ತೆ ಮೆಲ್ಲಗೆ ನೆಪ ಹೇಳಿದಳು. ಅವಳ ಮಾತನ್ನು ನಂಬಿ ಚೇಟಿ ಪದ್ಮಾವತಿಯರು ಸುಮ್ಮನಾದರು.

ರಾಜ, ವಿದೂಷಕರಿಗೆ ಒಳಗೆ ಸ್ತ್ರೀಯರಿರುವುದು ಗೊತ್ತಾಗಲಿಲ್ಲ. ಅವರ ಮಾತು ಗಳು ಒಳಗಿದ್ದವರಿಗೆ ಕೇಳುತ್ತಿತ್ತು. ತನ್ನ ಗೆಳೆಯನ ಪ್ರೇಮದ ಆಳವನ್ನು ತಿಳಿಯುವ ಕುತೂಹಲದಿಂದ ವಿದೂಷಕನು "ನಿನಗೆ ಯಾರಲ್ಲಿ ಪ್ರೀತಿ ಹೆಚ್ಚು ? ಹಿಂದಿನ ವಾಸವದತ್ತೆಯಲ್ಲೋ ಇಂದಿನ ಪದ್ಮಾವತಿಯಲ್ಲೋ ?" ಎಂದು ಕೇಳಿ ದನು ಸರಸವಾಗಿ.

ರಾಜನಿಗೆ ಧರ್ಮಸಂಕಟ. ಅದನ್ನು ಹೇಗೆ ಹೇಳುವುದು !

ರಾಜನು ಏನು ಹೇಳುವನೋ ಎಂದು ವಾಸವದತ್ತೆಗೆ ಕಾತರ.

ವಿದೂಷಕನು ಆರ್ಯಪುತ್ರನನ್ನು ಎಂತಹ ತೊಡಕಿನಲ್ಲಿ ಸಿಕ್ಕಿಸಿದನೆಂದು ಪದ್ಮಾವತಿ ಸಂಕಟಕ್ಕೊಳಗಾದಳು.

ರಾಜನು ಮೌನವಾಗಿದ್ದರೂ ವಿದೂಷಕನು ಬಿಡಲಿಲ್ಲ.

"ಒಬ್ಬಳು ಸತ್ತಳು ಮತ್ತೊಬ್ಬಳು ಇಲ್ಲಿಲ್ಲ, ಸಂಕೋಚಪಡದೆ ಹೇಳು" ಎಂದು ವಿದೂಷಕನು ಪ್ರೋತ್ಸಾಹಿಸಿದನು.

ರಾಜನು "ನೀನು ಬಾಯಾಳಿ. ನಿನ್ನೊಡನೆ ಹೇಳುವುದಿಲ್ಲ" ಎನ್ನಲು ತಾನು ಯಾರೊಡನೆಯೂ ಹೇಳುವುದಿಲ್ಲವೆಂದು ವಿದೂಷಕನು ಆಣೆಯಿಟ್ಟನು. ಹಾಗೂ ರಾಜನು ಬಾಯಿ ಬಿಡದಿರಲು ಅವನು ತನ್ನ ಸ್ನೇಹದ ಮೇಲಾಣೆಯಿಟ್ಟು ಅವನನ್ನು ಬಲಾತ್ಕರಿಸಿದನು.

ಇನ್ನು ರಾಜನು ಹೇಳದಿರಲಾರ. ಕಡೆಗೆ ಅವನು ಆಕೆಯ ಅಸದೃಶ ಗುಣ ರೂಪ ಗಳಿಗೆ ನಾನು ಸೋತಿದ್ದರೂ ವಾಸವದತ್ತೆಯಲ್ಲಿ ಅನುಲಗ್ನವಾಗಿರುವ ನನ್ನ ಮನಸ್ಸನ್ನು ತಿರುಗಿಸಲು ಆಕೆಗೆ ಅಸಾಧ್ಯ" ಎಂದು ಹೇಳಿದನು.

ಇವನ್ನು ಕಿವಿಗೊಟ್ಟು ಕೇಳಿದ ವಾಸವದತ್ತೆಗೆ ತನ್ನ ಕಷ್ಟಕ್ಕೆ ತಕ್ಕ ಬಹುಮಾನ ದೊರೆಯಿತೆಂದು ಆನಂದವಾಯಿತು.

ಚೇಟಿ "ನಿನ್ನ ಕಾಂತನು ಎಷ್ಟು ನಿರ್ದಯನು" ಎಂದು ಪದ್ಮಾವತಿಗೆ ಪಿಸುಗುಟ್ಟಿದಳು.

ಆದರೆ ಪ್ರಿಯನಲ್ಲಿ ಯಾವ ದೋಷವನ್ನೂ ಕಾಣದ ಸುಶೀಲೆಯಾದ ಪದ್ಮಾವತಿ "ವಾಸವದತ್ತೆಯಲ್ಲಿ ಅಷ್ಟೊಂದು ಪ್ರೀತಿಯಿಟ್ಟು ಅವಳ ಗುಣ ಪ್ರಶಂಸೆ ಮಾಡಬೇಕಾದರೆ ರಾಜನು ಬಹು ದಯಾಳುವಲ್ಲವೆ!" ಎಂದಳು.

ಈಗ ರಾಜನ ಸರದಿ. "ನೀನು ಯಾರನ್ನು ಮೆಚ್ಚುವೆ? ಹೇಳು. ಆಗಿನ ವಾಸವದತ್ತೆಯನ್ನೋ ಈಗಿನ ಪದ್ಮಾವತಿಯನ್ನೋ?" ಎಂದು ವಿದೂಷಕನನ್ನು ಕೇಳಿದನು.

ವಿದೂಷಕನು ಹೇಳದೆ ಜಾರಿಕೊಳ್ಳಲು ಪ್ರಯತ್ನಿಸಿದನು. ರಾಜನು ಬಿಡಲಿಲ್ಲ. ಕೊನೆಗೆ ವಿದೂಷಕನು "ನನಗೇನೋ ವಾಸವದತ್ತೆಯನ್ನು ಕಂಡರೆ ಬಹಳ ಇಷ್ಟ. ಪದ್ಮಾವತಿಯೂ ಒಳ್ಳೆಯ ರೂಪವತಿ. ಗುಣವತಿ. ಅವಳಿಗೆ ಕೋಪ ಅಹಂಕಾರಗಳಿಲ್ಲ. ಯಾವಾಗಲೂ ಒಳ್ಳೆಯ ಮಾತನ್ನೇ ಆಡುತ್ತಾಳೆ. ರಸವತ್ತಾದ ಭೋಜನಗಳಿದ್ದಾಗ ವಾಸವದತ್ತೆ 'ಆರ್ಯವಸಂತಕ'ನೆಲ್ಲಿ ಎಂದು ನನ್ನನ್ನು ಹುಡುಕಿಕೊಂಡು ಬರುತ್ತಿದ್ದಳು" ಎಂದನು.

ಆ ಮಾತನ್ನು ಕೇಳುತ್ತಿದ್ದಂತೆ ರಾಜನಿಗೆ ವಾಸವದತ್ತೆಯ ಮೇಲಿನ ಪ್ರೇಮವು ಮರುಕಳಿಸಿ ತಾನೆಲ್ಲಿದ್ದೇನೆಂಬುದನ್ನೇ ಮರೆತು, "ಆಗಲಿ ಇದನ್ನು ವಾಸವದತ್ತೆಗೆ ತಿಳಿಸುವೆ" ಎಂದನು, ಅವಳು ಮೃತಪಟ್ಟಳೆಂಬುದನ್ನು ಮರೆತು, ಹಿಂದಿನ ರೂಢಿಯಂತೆ.

ವಿದೂಷಕನು ಅವಳು ಗತಿಸಿರುವಳೆಂದು ಜ್ಞಾಪಿಸಬೇಕಾಯಿತು. ಆದರೂ ರಾಜನಿಗೆ ಕಣ್ಣೀರು ತುಳುಕಿತು. "ನಿನ್ನ ಹಾಸ್ಯೋಕ್ತಿಯಿಂದ ನನ್ನ ಮನಸ್ಸು ಕಲಕಿ ಹಿಂದಿನ ಬಳಕೆಯಂತೆ ನನ್ನಿಂದ ಮಾತನಾಡಿಸಿತು" ಎಂದನು.

ಆ ಮಾತುಗಳನ್ನು ಕೇಳಿ ವಾಸವದತ್ತೆಗೆ ಹಿತವೆನಿಸಿತು. ಶೋಕ ಹೆಚ್ಚಿದುದರಿಂದ ರಾಜನು ತನ್ನ ಕೈವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡನು. ಮಲಿನವಾದ ಮುಖವನ್ನು ತೊಳೆಸಲು ವಿದೂಷಕನು ನೀರನ್ನು ತರಬೇಕೆಂದು ಅಲ್ಲಿಂದ ಹೋದನು.

ಆ ಸಮಯದಲ್ಲಿ ಮುಖವನ್ನು ಮರೆಮಾಡಿಕೊಂಡಿರುವ ರಾಜನ ಕಣ್ಣಿಗೆ ಬೀಳ ದಂತೆ ತಪ್ಪಿಸಿಕೊಂಡು ಹೋಗಲು ಪದ್ಮಾವತಿ ಯೋಚಿಸಿದಳು.

ಆದರೆ ವಾಸವದತ್ತೆ "ವ್ಯಸನ ಸಮಯದಲ್ಲಿ ನಿನ್ನ ಕಾಂತನನ್ನು ಬಿಟ್ಟು ಹೋಗು ವುದು ಸರಿಯಲ್ಲ" ಎಂದು ಹೇಳಿದುದರಿಂದ ಅವನನ್ನು ಸಂತೈಸಲು ಅವಳು ಹೋಗಬೇಕಾಯಿತು.

ವಾಸವದತ್ತೆ, ಚೇಟಿಯರು ಪದ್ಮಾವತಿಯನ್ನು ಅಲ್ಲಿ ಬಿಟ್ಟು ರಾಜನು ಕಾಣದಂತೆ ಅಲ್ಲಿಂದ ಹೊರಟುಹೋದರು.

ಅಷ್ಟರಲ್ಲಿ ವಿದೂಷಕನೂ ಎಲೆಯಲ್ಲಿ ನೀರನ್ನು ತೆಗೆದುಕೊಂಡು ಬಂದನು. ಇದೇ ನೆಂದು ವಿದೂಷಕನನ್ನು ಪದ್ಮಾವತಿ ಕೇಳಿದಳು. "ಕಾಶ ಪುಷ್ಪದ ಪರಾಗವು ಕಣ್ಣಿಗೆ ಬಿದ್ದು ಕಣ್ಣೀರು ಬಂದಿತು. ಆದ್ದರಿಂದ ಮುಖ ತೊಳೆಯಲು ಇದೋ ನೀರು ತಂದಿದ್ದೇನೆ. ಇದನ್ನು ತೆಗೆದುಕೊಂಡು ನೀನೇ ಕೊಡು" ಎಂದು ವಿದೂಷಕನು ಹೇಳಿದನು.

ಅನಿರೀಕ್ಷಿತವಾಗಿ ಪದ್ಮಾವತಿಯನ್ನು ಕಂಡು ಗಾಬರಿಯಾದ ರಾಜನ ಕಿವಿಯಲ್ಲಿ ವಿದೂಷಕನು ತಾನು ಅವಳಿಗೆ ಹೇಳಿದ ಕಾರಣವನ್ನು ತಿಳಿಸಿ ಅವನನ್ನು ಸಮಾ ಧಾನಮಾಡಿದನು.

ರಾಜನು ಪದ್ಮಾವತಿಯ ಕೈಯಿಂದ ನೀರನ್ನು ತೆಗೆದುಕೊಂಡು ಬಾಯಿಯನ್ನು ತೊಳೆದು ಅವಳನ್ನು ಪಕ್ಕದಲ್ಲಿ ಕೂರಿಸಿಕೊಂಡನು. 'ದಿಟವನ್ನು ಹೇಳಿದರೆ ಇವಳು ಸಂಕಟಪಡುವಳು. ಎಷ್ಟೇ ಧೀರೆಯೆನ್ನಿಸಿಕೊಂಡರೂ ಹೆಂಗಸರು ಸ್ವಾಭಾವಿಕವಾಗಿ ಭೀರುಗಳಲ್ಲವೆ!' ಎಂದು ಅವನು ತನ್ನಲ್ಲೇ ಅಂದುಕೊಂಡು "ಗಾಳಿಯಿಂದ ಕಾಶ ಕುಸುಮದ ಪರಾಗವು ನನ್ನ ಕಣ್ಣಲ್ಲಿ ಬಿತ್ತು" ಎಂದು ಕಣ್ಣೀರಿಗೆ ಕಾರಣವನ್ನು ಅವಳಿಗೆ ವಿವರಿಸಿದನು. ಆಗಲೇ ಮಧ್ಯಾಹ್ನವಾಗಿದ್ದು ದರಿಂದ ಹೊತ್ತಾಯಿತೆಂದು ಅವರು ಅಲ್ಲಿಂದ ಅರಮನೆಗೆ ಹೋದರು.

ಒಂದು ರಾತ್ರಿ ಪದ್ಮಾವತಿಗೆ ತಲೆನೋವು ಬಂದಿತು. ಏನಾದರೂ ಕಥೆಗಳನ್ನು ಹೇಳುತ್ತಾ ಪದ್ಮಾವತಿಗೆ ತಲೆನೋವು ಅಷ್ಟಾಗಿ ಕಾಣದಂತೆ ವಿನೋದಪಡಿಸುವ ರೆಂದು ವಾಸವದತ್ತೆಯನ್ನು ಕರೆತರಲು ಚೇಟಿ ಹೋದಳು. ಅವಳಿಂದ ಪದ್ಮಾ ವತಿಯ ಅಸ್ವಸ್ಥತೆ ವಿದೂಷಕನಿಗೂ ತಿಳಿಯಿತು. ರಾಜನಿಗೆ ತಿಳಿಸಲು ಅವನು ತ್ವರೆಯಿಂದ ಅವನ ಬಳಿಗೆ ಹೋದನು.

ವಿದೂಷಕನು ಬಂದಾಗ ರಾಜನು 'ಪದ್ಮಾವತಿ ನನ್ನ ಪ್ರೇಮವನ್ನು ಸೂರೆಗೊಂಡಿದ್ದರೂ ನನ್ನ ಮನಸ್ಸು ಲಾವಾಣಕವಹ್ನಿಯಲ್ಲಿ ಬೆಂದಳಿದ ವಾಸವದತ್ತೆಯನ್ನೇ ಆಸಕ್ತಿಯಿಂದ ಚಿಂತಿಸುತ್ತಿದೆಯಲ್ಲವೆ !' ಎಂದು ಯೋಚಿಸುತ್ತಿದ್ದನು. ವಿದೂಷಕನು ಅವನಿಗೆ ಪದ್ಮಾವತಿಯ ಅಸ್ವಸ್ಥತೆಯನ್ನು ತಿಳಿಸಲು ರಾಜನು ಅಪಾಯ ಶಂಕೆಯಿಂದ ಅವನೊಡನೆ ಶೀಘ್ರವಾಗಿ ಆಗಲೇ ಸಮುದ್ರಗೃಹದಲ್ಲಿ ಪದ್ಮಾವತಿ ಇರಬಹುದೆಂದು ಅಲ್ಲಿಗೆ ಹೋದನು.

ಆದರೆ ಅಲ್ಲಿ ಪದ್ಮಾವತಿ ಇರಲಿಲ್ಲ. ಅಥವಾ ಅವಳು ಬಂದು ಹೋಗಿರುವ ಯಾವ ಗುರುತೂ ಕಾಣಲಿಲ್ಲ. ಅವಳು ಬರಬಹುದೆಂದು ನಿರೀಕ್ಷಿಸುತ್ತಾ ಅಲ್ಲಿದ್ದ ಹಾಸಿನ ಮೇಲೆ ಅವರು ಕುಳಿತುಕೊಂಡರು. ರಾಜನಿಗೆ ನಿದ್ರೆ ಬರುವಂತೆ ಕಂಡುದರಿಂದ ಹೊತ್ತು ಕಳೆಯಲು ವಿದೂಷಕನು "ಉಜ್ಜಯಿನಿಯೆಂಬ ಒಂದು ನಗರ........" ಎಂದು ಕಥೆಯನ್ನು ಪ್ರಾರಂಭಿಸಿದನು.

ಉಜ್ಜಯಿನಿಯ ಹೆಸರನ್ನು ಕೇಳಿ ರಾಜನಿಗೆ ವಾಸವದತ್ತೆಯ ಸ್ಮರಣೆ ಬಂದಿತು. "ನಾನಂದು ಉಜ್ಜಯಿನಿಯಿಂದ ಹೊರಡುವಾಗ ತನ್ನವರನ್ನು ಅಗಲಲಾರದೆ ವಾಸವದತ್ತೆ ನನ್ನ ಎದೆಯ ಮೇಲೆ ತಲೆಯಿಟ್ಟು ಕಣ್ಣೀರಿನಿಂದ ತೋಯಿಸಿದುದು ನನಗೀಗಲೂ ನೆನಪಾಗುತ್ತಿದೆ. ಅಲ್ಲದೆ ಅವಳು ವೀಣೆಯನ್ನು ಕಲಿಯುವಾಗ ಸ್ನೇಹದಿಂದ ನನ್ನನ್ನೇ ನೋಡುತ್ತ ತೊಡೆಯ ಮೇಲಿನ ವಾದ್ಯವು ಜಾರಿದರೂ ಬರಿಗೈಯನ್ನೇ ಆಡಿಸುತ್ತಿದ್ದಳು" ಎಂದು ನೆನೆದುಕೊಳ್ಳುತ್ತ ಶೋಕಿಸ ತೊಡಗಿದನು.

ವಿದೂಷಕನು "ಹೋಗಲಿ, ಆ ಕಥೆ ಬೇಡ. ಬೇರೆ ಹೇಳುತ್ತೇನೆ" ಎಂದು ರಾಜನು ಬ್ರಹ್ಮದತ್ತನೆಂದೂ ನಗರವು ಕಾಂಪಿಲ್ಯವೆಂದೂ ಹೇಳುವ ಬದಲು "ಬ್ರಹ್ಮದತ್ತವೆಂಬ ನಗರದಲ್ಲಿ ಕಾಂಪಿಲ್ಯನೆಂಬ ರಾಜನಿದ್ದನು" ಎಂದು ಕಥೆಯನ್ನು ಪ್ರಾರಂಭಿಸಿದನು. ಆ ತಪ್ಪನ್ನು ರಾಜನು ತಿದ್ದಿದನು. ವಿದೂಷಕನು ಆ ಕಥೆಯ ರಾಜನ ಮತ್ತು ನಗರದ ಹೆಸರನ್ನು ಬಾಯಿಪಾಠ ಮಾಡುತ್ತಿದ್ದಂತೆ ರಾಜನು ನಿದ್ದೆ ಹೋದನು.

ರಾತ್ರಿಯ ತಂಗಾಳಿ ಚಳಿ ಹುಟ್ಟಿಸುತ್ತಿತ್ತು. ಆದ್ದರಿಂದ ವಿದೂಷಕನು ಹೊದೆಯುವುದಕ್ಕೆ ಕಂಬಳಿಯನ್ನು ತರಲು ಅಲ್ಲಿಂದ ಎದ್ದು ಹೋದನು.

ವಾಸವದತ್ತೆಯನ್ನು ಚೇಟಿ ಸಮುದ್ರಗೃಹದ ಬಳಿಯಲ್ಲಿ ಬಿಟ್ಟು ತಾನು ಶಿರೋಲೇಪನವನ್ನು ತರಲು ಹೋದಳು. ವಾಸವದತ್ತೆ ಮಲಗಿದ್ದ ರಾಜನನ್ನು

ಪದ್ಮಾವತಿಯೆಂದೇ ಭಾವಿಸಿ ಹತ್ತಿರಕ್ಕೆ ಹೋದಳು. ರಾಜನು ಸುಖವಾಗಿ ನಿದ್ದೆ ಮಾಡುತ್ತಿದ್ದುದರಿಂದ ಅವಳು ಈಗ ಪದ್ಮಾವತಿಗೆ ಗುಣವಾಗಿರಬಹುದೆಂದು ಭಾವಿಸಿ ಅವಳ ಕಾವಲಿಗೆ ತಾನಿರಬೇಕೆಂದುಕೊಂಡಳು. ತಾನು ದೂರದಲ್ಲಿ ಕುಳಿತರೆ ಪದ್ಮಾವತಿ ಏನಾದರೂ ತಿಳಿದುಕೊಳ್ಳಬಹುದೆಂದು ಅವಳ ಪಕ್ಕದಲ್ಲೇ ಕುಳಿತುಕೊಂಡಳು. ಕುಳಿತ ಕೂಡಲೆ ಅವಳಿಗೆ ಅಪೂರ್ವವಾದ ಉಲ್ಲಾಸ ಕಂಡಿತು. ಹಾಸಿಗೆಯ ಒಂದು ಪಕ್ಕವನ್ನು ತನಗಾಗಿ ಅವಳು ಬಿಟ್ಟಿರುವಳೆಂದು ಊಹಿಸಿ ತಾನೂ ಪಕ್ಕದಲ್ಲಿ ಮಲಗಿಕೊಂಡಳು.

ನಿದ್ರೆಯಲ್ಲಿ ರಾಜನು "ಹಾ ವಾಸವದತ್ತೆ !" ಎಂದು ಕನವರಿಸಿದನು.

ತಕ್ಷಣ ವಾಸವದತ್ತೆ ಮೇಲೆದ್ದು "ಅಹಾ ! ಏನಿದು, ಇವಳು ಪದ್ಮಾವತಿಯಲ್ಲ! ಆರ್ಯಪುತ್ರನಂತಿದೆ. ಆರ್ಯಪುತ್ರನು ನನ್ನನ್ನು ಗುರುತಿಸಿದನೇನೊ !" ಎಂದು ಸಂಶಯಪಟ್ಟಳು.

ಮತ್ತೆ ಅವನು "ಹಾ ! ಅವಂತಿ ರಾಜಪುತ್ರಿ" ಎಂದನು.

ರಾಜನು ಕನಸು ಕಾಣುತ್ತಿರುವನೆಂದು ಅವಳಿಗೆ ಧೈರ್ಯವಾಯಿತು. "ಇಲ್ಲಿ ಯಾರೂ ಇಲ್ಲದಿರುವುದರಿಂದ ಆರ್ಯಪುತ್ರನನ್ನು ಸ್ವಲ್ಪಹೊತ್ತು ನೋಡಿ ಆನಂದ ಪಡುವೆನು" ಎಂದು ಅವನನ್ನೇ ನೋಡುತ್ತ ನಿಂತುಕೊಂಡಳು. ಅವನ ಕನವರಿಕೆಯ ಮಾತಿಗೆ ಅವಳು ಉತ್ತರ ಕೊಡತೊಡಗಿದಳು.

ರಾಜ ಕೇಳಿದನು : "ಹಾ ಪ್ರಿಯ ಶಿಷ್ಯೆ, ಉತ್ತರ ಕೊಡು."

ವಾಸವದತ್ತೆ "ಪ್ರಾಣಕಾಂತ, ಉತ್ತರವನ್ನು ಕೊಡುತ್ತಿರುವೆನಲ್ಲವೆ ?" ಎಂದಳು.

"ನಿನಗೆ ಕೋಪವೇನು ?" ರಾಜನು ಕೇಳಿದನು.

"ಕೋಪವಿಲ್ಲ. ದುಃಖಿಸುತ್ತಿರುವೆನು."

"ನಿನಗೆ ಸವತಿಯಂತಿದ್ದ ವಿರಚಿಕೆಯೇನಾದರೂ ಈಗ ನಿನ್ನ ನೆನಪಿಗೆ ಬಂದಳೇನು ?" ದೈನ್ಯದಿಂದ ರಾಜನು ಕೇಳಿದನು.

"ಸಾಕು ಸಾಕು, ಇಲ್ಲೂ ಅವಳ ಚಿಂತೆಯೆ ?" ಸಿಟ್ಟಿನ ಧ್ವನಿಯಲ್ಲಿ ಹೇಳಿದಳು.

"ಅವಳ ವಿಷಯವಾಗಿ ನನ್ನ ಮೇಲೆ ಕೋಪವಿದ್ದರೆ ಇದೋ, ಕೈ ಮುಗಿದು ನಿನ್ನ ಕ್ಷಮಾಪಣೆ ಕೇಳುತ್ತೇನೆ" ಎಂದು ಅವನು ತನ್ನ ಕೈಗಳನ್ನು ಮುಂದೆ ಚಾಚಿದನು. ಅವು ಹಾಸಿಗೆಯ ಹೊರಗೆ ಜೋಲಾಡುತ್ತಿದ್ದುವು. ಯಾರಾದರೂ ಬಂದರೆ

ಪ್ರಮಾದವಾಗುವುದೆಂದುಕೊಂಡು ವಾಸವದತ್ತೆ ರಾಜನ ಕೈಗಳನ್ನು ಸರಿಯಾಗಿ ಇರಿಸಿ ಅಲ್ಲಿಂದ ಹೊರಕ್ಕೆ ಹೋದಳು.

ರಾಜನು ಕೂಡಲೆ ಮೇಲೆದ್ದು "ಹಾ, ವಾಸವದತ್ತೆ, ನಿಲ್ಲು ನಿಲ್ಲು". ಎಂದು ಕರೆಯುತ್ತಾ ಮುಂದೆ ನುಗ್ಗಿದನು. ಅವಳಾಗಲೇ ಹೊಸಲು ದಾಟಿ ಕತ್ತಲೆಯಲ್ಲಿ ಮರೆಯಾಗಿದ್ದಳು. ಅವನು ಹೊಸಲನ್ನು ಎಡವಿ ನಿಂತು ಇದೇನು ವಾಸವದತ್ತೆಯನ್ನು ನಿಜವಾಗಿ ನೋಡಿದೆನೊ ಇಲ್ಲವೆ ಭ್ರಾಂತಿಯೊ ಎಂದು ಯೋಚಿಸುತ್ತಾ ನಿಂತುಕೊಂಡನು.

ವಿದೂಷಕನು ಕಂಬಳಿಯನ್ನು ಹಿಡಿದುಕೊಂಡು ರಾಜನ ಬಳಿಗೆ ಬಂದನು. ರಾಜನು ವಾಸವದತ್ತೆ ಬದುಕಿರುವುದಾಗಿಯೂ ಅವನನ್ನು ಅವಳು ಎಬ್ಬಿಸಿ ಹೋದುದಾಗಿಯೂ ಅವನಿಗೆ ಹೇಳಿದನು.

ವಿದೂಷಕನಿಗೆ ನಂಬಿಕೆಯಾಗಲಿಲ್ಲ. ಉಜ್ಜಯಿನಿಯ ಕಥೆಯನ್ನು ಕೇಳುತ್ತಿದ್ದುದರಿಂದ ಅವನಿಗೆ ಕನಸು ಬಿದ್ದಿರಬಹುದು ಅಥವಾ ನಗರದ ಅವಂತಿಸುಂದರಿಯೆಂಬ ಯಕ್ಷಿಣಿ ಅವನ ಕಣ್ಣಿಗೆ ಬಿದ್ದಿರಬಹುದೆಂದು ಅವನು ಸಮಾಧಾನಮಾಡಿದನು. ಅವಳ ಉದ್ದವಾದ ಮುಂಗುರುಳು, ಕಾಡಿಗೆ ಹಚ್ಚಿದ ಕಣ್ಣು ಮತ್ತು ಸುಂದರ ಮುಖವನ್ನು ಕಂಡುದಾಗಿಯೂ ಅವಳು ಮುಟ್ಟಿದುದರಿಂದ ತನಗಾದ ರೋಮಾಂಚನ ಇನ್ನೂ ಇದೆಯೆಂದು ರಾಜನು ಹೇಳಿದನು. ಆದರೂ ವಿದೂಷಕನು ಅವನನ್ನು ಚತುಶ್ಶಾಲೆಗೆ ಕರೆದೊಯ್ದನು. ಕಂಚುಕಿ ಶತ್ರುವಾದ ಆರುಣಿಯನ್ನು ಸದೆಬಡಿಯಲು ಮಂತ್ರಿ ರುಮಣ್ವಂತನು ಸೈನ್ಯದೊಡನೆ ಬಂದಿರುವನೆಂದು ರಾಜನಿಗೆ ತಿಳಿಸಿದನು. ದುರುಳನಾದ ಆರುಣಿಯನ್ನು ದಿಗ್ಬಲಿ ಕೊಡುವೆನೆಂದು ರಾಜನು ಸಿದ್ಧನಾಗಿ ಹೊರಟನು.

ಮತ್ತೆ ರಾಜನೊಮ್ಮೆ ಉಪ್ಪರಿಗೆಯ ಮೇಲೆ ನಿಂತು ಪಕ್ಕದಲ್ಲಿ ಯಾರೊ ವೀಣೆ ನುಡಿಸುವುದನ್ನು ಕೇಳಿ ಆ ವೀಣೆ ತನ್ನ ಘೋಷವತಿಯಾಗಿರಬಹುದೆಂದು ಶಂಕಿಸಿ ಅದನ್ನು ತರಿಸಿದಾಗ ಅದೇ ವೀಣೆಯಾಗಿತ್ತು.

ಅದನ್ನು ನೋಡಿ ಮೂರ್ಛಿತನಾಗಿ ಎಚ್ಚೆತ್ತು ರಾಜನು "ಹಾ, ಘೋಷವತಿ! ನಿನ್ನನ್ನೇನೊ ನೋಡಿದೆ. ಅವಳನ್ನು ನೋಡಲಿಲ್ಲ" ಎಂದು ದುಃಖಿಸುತ್ತಿದ್ದನು. ಜೊತೆಯಲ್ಲಿದ್ದ ವಿದೂಷಕನು ಅವನನ್ನು ಸಂತೈಸಿದನು. "ಇದು ಚಿರಕಾಲ ನನ್ನಲ್ಲಿ ಮರೆತು ಮಲಗಿದ್ದ ಕಾಮನನ್ನು ಎಚ್ಚರಿಸಿತು" ಎಂದು ಶಿಥಿಲವಾಗಿದ್ದ ವೀಣೆಯನ್ನು ಸರಿಮಾಡಿಕೊಂಡು ಬರಲು ವಿದೂಷಕನನ್ನು ಅವನು ಕಳುಹಿಸಿದನು.

ಆ ಸಮಯಕ್ಕೆ ಮಹಾಸೇನ ಮಹಾರಾಜನು ಕಳುಹಿಸಿದ್ದ ರೈಭ್ಯನೆಂಬ ಕಂಚುಕಿಯೂ, ಅಂಗಾರವತೀ ಮಹಾರಾಣಿಯ ಕಡೆಯಿಂದ ವಾಸವದತ್ತೆಯ ವಸುಂಧರೆಯೆಂಬ ದಾದಿಯೂ ವತ್ಸರಾಜನನ್ನು ಕಾಣಲು ಬಂದರು.

ರಾಜನು ವಾಸವದತ್ತೆಯ ಕಡೆಯವರನ್ನು ನೋಡಲೆಂದು ಪದ್ಮಾವತಿಯನ್ನು ಬಳಿಯಲ್ಲೇ ಇರಿಸಿಕೊಂಡನು. ರೈಭ್ಯ, ವಸುಂಧರೆಯರು ಬಂದು ವತ್ಸರಾಜನಿಗೆ ತಮ್ಮ ಮಹಾರಾಜ ಮಹಾರಾಣಿಯರ ಸಂದೇಶವನ್ನು ಹೇಳಿ ರಾಜನ ಕ್ಷೇಮವನ್ನು ಕೇಳಿದರು.

ರಾಜನು "ಇದೋ, ನನ್ನ ಕುಶಲವೆಲ್ಲವೂ ಹೀಗಿದೆ" ಎಂದು ದುಃಖದಿಂದ ನಿಟ್ಟುಸಿರಿಟ್ಟನು.

ರೈಭ್ಯನು "ಸಾಯುವಾಗ ಯಾರನ್ನು ಯಾರು ತಾನೆ ರಕ್ಷಿಸಲು ಸಾಧ್ಯ! ಹಗ್ಗವು ತುಂಡಾಗಿ ಬಾವಿಗೆ ಬೀಳುವ ಕೊಡವನ್ನು ಹಿಡಿಯುವುದಕ್ಕಾಗುತ್ತದೆಯೇ! ಕಾಡಿನಂತೆ ಬೆಳೆದ ಲೋಕವು ನಿರ್ನಾಮವಾಗಿ ಮತ್ತೆ ಹುಟ್ಟುತ್ತದೆ" ಎಂದು ಸಮಾಧಾನಪಡಿಸಿದನು.

ವಸುಂಧರೆ "ಮಹಾರಾಣಿ ಅಂಗಾರವತಿ ಇದನ್ನು ನೋಡಿಕೊಂಡು ಸಮಾಧಾನ ಹೊಂದು ಎಂದು ಹೇಳಿ ಕೊಟ್ಟಿದ್ದಾರೆ" ಎಂದು ಹೇಳಿ ವಾಸವದತ್ತೆ ವತ್ಸರಾಜರ ಚಿತ್ರವನ್ನು ಬರೆಯಿಸಿ ಆ ಚಿತ್ರಪಟಕ್ಕೆ ಅಂಗಾರವತಿ ಹಿಂದೆ ವಿವಾಹ ಮಾಡಿಸಿದ್ದ ಪಟವನ್ನು ರಾಜನಿಗೆ ಕೊಟ್ಟಳು. ಅತ್ತೆ ಮಾವದಿರ ವಾತ್ಸಲ್ಯವನ್ನು ನೆನೆದು ರಾಜನಿಗೆ ಸಂಕಟವಾಯಿತು.

ಪದ್ಮಾವತಿ ಪಟದಲ್ಲಿರುವ ಗುರುಜನರಿಗೆ ನಮಸ್ಕರಿಸಬೇಕೆಂದು ಪಟವನ್ನು ನೋಡಿ ಅನುಮಾನಿಸಿ ವಾಸವದತ್ತೆಯ ಚಿತ್ರವನ್ನು ಹೋಲುವ ಹೆಂಗುಸೊಬ್ಬಳು ನ್ಯಾಸರೂಪವಾಗಿ ತನ್ನಲ್ಲಿರುವಳೆಂದು ಹೇಳಿ ಆ ಆವಂತಿ ಕನ್ಯೆ ತನ್ನಲ್ಲಿಗೆ ಬಂದ ವಿಷಯವನ್ನು ವಿವರಿಸಿದಳು. ರಾಜನು ಆ ಸ್ತ್ರೀಯು ಬ್ರಾಹ್ಮಣನ ಸೋದರಿಯೇ ಆಗಿದ್ದ ಪಕ್ಷದಲ್ಲಿ ಅವಳು ಬೇರೆಯವಳೇ ಆಗಿರಬೇಕೆಂದು ಸುಮ್ಮನಾದನು.

ಅದೇ ಸಮಯಕ್ಕೆ ಬ್ರಾಹ್ಮಣ ವೇಷಧಾರಿಯಾದ ಯೌಗಂಧರಾಯಣನು ಬಂದು ಪ್ರತೀಹಾರಿಯ ಕೈಯಲ್ಲಿ ರಾಜನಿಗೆ ತನ್ನ ಆಗಮನವನ್ನು ಹೇಳಿಕಳಿಸಿದನು. ಪದ್ಮಾವತಿ ಅದೇ ಬ್ರಾಹ್ಮಣನು ಬಂದಿರಬಹುದೆಂದೂ ಅವನಿಗೆ ವಾಸವದತ್ತೆಯನ್ನು ಒಪ್ಪಿಸಬೇಕೆಂದೂ ಅವಳೇ ಹೋಗಿ ವಾಸವದತ್ತೆಯನ್ನು ಕರೆತಂದಳು.

ರಾಜನು ಆ ಬ್ರಾಹ್ಮಣನನ್ನು ಕರೆಯಿಸಿ ಮಹಾಸೇನನ ಕಡೆಯವರಾದ ಕಂಚುಕಿ ದಾದಿಯರ ಸಮಕ್ಷಮದಲ್ಲಿ ವಾಸವದತ್ತೆಯನ್ನು ಅವನಿಗೆ ಒಪ್ಪಿಸಿದನು.

ವಸುಂಧರೆ ಆಗ ಮುಸುಕು ಹಾಕಿಕೊಂಡಿದ್ದ ವಾಸವದತ್ತೆಯನ್ನು ಗುರುತಿಸಿದಳು. ರಾಜನೂ ಗುರುತಿಸಿ ಅವಳನ್ನು ಪದ್ಮಾವತಿಯೊಡನೆ ಅಂತಃಪುರಕ್ಕೆ ಹೋಗಲು ಹೇಳಿದನು. ಆದರೆ ಬ್ರಾಹ್ಮಣನು ಅವಳು ತನ್ನ ತಂಗಿಯೆಂದು ವಾದಿಸಿದನು. ಆಕೆಯನ್ನು ಪರೀಕ್ಷಿಸಿ ನೋಡಬೇಕೆಂದು ರಾಜನು ಅವಳು ಹಾಕಿಕೊಂಡಿದ್ದ ಮುಖ ಪರದೆಯನ್ನು ತೆರೆಯಲು ಅಪ್ಪಣೆ ಮಾಡಿದನು.

ಆಗ ಯೌಗಂಧರಾಯಣ, ವಾಸವದತ್ತೆಯರು ತಮ್ಮ ನಿಜವೇಷದಿಂದ ನಿಂತರು. ರಾಜನಿಗೆ ಇದು ಕನಸೋ ನನಸೋ ಎಂದು ದಿಗ್ಭ್ರಾಂತಿ. ಯೌಗಂಧರಾಯಣನು ಅವನಿಗೆ ನಮಸ್ಕರಿಸಿ ತಾನು ಇದುವರೆಗೆ ದೇವಿಯನ್ನು ಕಣ್ಣಿಗೆ ಬೀಳದಂತೆ ಇಟ್ಟಿದ್ದಕ್ಕೆ ರಾಜನ ಕ್ಷಮಾಪಣೆಯನ್ನು ಬೇಡಿದನು.

ರಾಜನು "ಮಂತ್ರಬಲದಿಂದ, ಸಮಯೋಚಿತ ಸಾಹಸದಿಂದ ಮುಳುಗಿದ್ದ ನನ್ನನ್ನು ಎತ್ತಿ ಉದ್ಧರಿಸಿದ ಸಚಿವೋತ್ತಮ ನೀನಲ್ಲವೆ!" ಎಂದು ಅವನನ್ನು ಹೊಗಳಿದನು. ಪದ್ಮಾವತಿ ವಾಸವದತ್ತೆಗೆ ವಂದಿಸಿ ಅವಳನ್ನು ಸಾಮಾನ್ಯ ಸಖಿಯಂತೆ ತಾನು ನಡೆಸಿಕೊಂಡ ಅತ್ಯಾಚಾರವನ್ನು ಮನ್ನಿಸಬೇಕೆಂದು ಬೇಡಿಕೊಂಡಳು.

ವತ್ಸರಾಜನ ಇಷ್ಟಾನುಸಾರವಾಗಿ ಅವನಿಗೆ ಯೌಗಂಧರಾಯಣನು ತಾನು ಮಾಡಿದ ಉಪಾಯದ ಉದ್ದೇಶವನ್ನು ವಿವರಿಸಿದನು. ಮಂತ್ರಿಯ ಸ್ವಾಮಿ ಭಕ್ತಿಗೆ ರಾಜನು ತಲೆದೂಗಿದನು. ವತ್ಸರಾಜನ ಆನಂದ ಎಲ್ಲೆ ಮೀರಿತು. ಏಕಕಾಲದಲ್ಲಿ ಅವನಿಗೆ ಎರಡು ಲಾಭಗಳುಂಟಾದುವು. ಒಂದು ಕಡೆ ಕಳೆದು ಹೋದ ಹೆಂಡತಿಯನ್ನು ಮತ್ತೆ ಪಡೆದನು. ಮತ್ತೊಂದು ಕಡೆ ಕಳೆದುಹೋಗಿದ್ದ ರಾಜ್ಯ ಮತ್ತೆ ಕೈಸೇರಿತು. ಅಲ್ಲದೆ ಅವನ ಭಾಗ್ಯ ದೇವತೆಯಂತೆ ಪದ್ಮಾವತಿಯೂ ಅವನ ಕೈಹಿಡಿದಳು. ದುಃಖಸಂತಪ್ತರಾಗಿದ್ದ ವಾಸವದತ್ತೆಯ ತಾಯಿತಂದೆಯರನ್ನು ಕಂಡು ಸಂತೈಸಲು ವತ್ಸರಾಜನು ಮಂತ್ರಿ ಪತ್ನಿಯರೊಡನೆ ಅಂದೇ ಉಜ್ಜಯಿನಿಗೆ ಪ್ರಯಾಣ ಬೆಳೆಸಿದನು.

---



# ಚಾರುದತ್ತ

ಒಂದಾನೊಂದು ಕಾಲವಲ್ಲಿ ಉಜ್ಜಯಿನಿ ನಗರವಲ್ಲಿ ಚಾರುವತ್ತನೆಂದೊಬ್ಬ ಶ್ರೀಮಂತ ವರ್ತಕನಿದ್ದನು. ಅವನು ತುಂಬಾ ಉದಾರಿಯೂ ದಾನಶೀಲನೂ ಆಗಿದ್ದನು. ಅವನ ಮನೆಗೆ ಯಾರೇ ಹೋಗಿ ಕೈವೊಡ್ಡಿದರೂ ಅವನು ಅವರನ್ನು ಬರಿಗೈಯಲ್ಲಿ ಕಳುಹಿಸುತ್ತಿರಲಿಲ್ಲ. ಅವನು ತನ್ನ ಅಪಾರ ಸಂಪತ್ತನ್ನು ಬಂಧು ಬಳಗದವರಿಗೆ ಮತ್ತು ಅನಾಥರಿಗೆ ಬೇಕಾದಷ್ಟು ದಾನಮಾಡುತ್ತಿದ್ದನು. ಅವ ನಲ್ಲಿ ಹಣವಿರುವತನಕ ಅವನ ಮನೆ ಸದಾ ಯಾತ್ರಾಸ್ಥಳದಂತೆ ಜನಸಂಗುಳಿ ಯಿಂದ ಕಿಕ್ಕಿರಿದಿತ್ತು.

ಚಾರುದತ್ತನು ಎಷ್ಟೇ ದಾನಕೊಟ್ಟರೂ ಅವನ ಕೈ ಸೋಲಲಿಲ್ಲ, ಮನಸ್ಸಿಗೆ ತೃಪ್ತಿಯಾಗಲಿಲ್ಲ. ಆದರೆ ಅವನ ಧನರಾಶಿ ಕೆಲವು ವರುಷಗಳಲ್ಲೇ ಕರಗಿ ಹೋಯಿತು. ಅವನು ಕಂಡ ಕಂಡವರಿಗೆಲ್ಲ ಕೊಟ್ಟು ಬಟ್ಟೆವರಿದ್ರನಾದನು. ಅವನಿಗೆ ಉಣಲುಡಲೂ ಕೊರತೆಯಾಯಿತು. ತನ್ನ ಮಡದಿ ಮಕ್ಕಳ ಪೋಷ ಣೆಯೂ ಅವನಿಗೆ ಕಷ್ಟವಾಯಿತು. ಅವನನ್ನು ಆಶ್ರಯಿಸಿದ್ದ ನೆಂಟರಿಷ್ಟರು ಅವನ ಮನೆಯಿಂದ ಕಾಲುಕಿತ್ತರು. ಕೊನೆಗೆ ಅವನ ವಿಶಾಲ ಗೃಹವು ನಿರ್ಜನ ವಾಯಿತು.

ವಿದೂಷಕನು ಚಾರುದತ್ತನ ನೆಚ್ಚಿನ ಗೆಳೆಯ. ಚಾರುವತ್ತ ಸಿರಿವಂತನಾಗಿದ್ದಾಗ ಅವನು ಉಂಡುತಿಂದವನು. ಅವನು ಬಡವನಾದ ಮೇಲೂ ವಿದೂಷಕನು ಉಳಿದವರಂತೆ ಅವನ ಕೈ ಬಿಡಲಿಲ್ಲ, ಅವನ ಮನೆಯನ್ನು ತೊರೆದು ಪಲಾಯನ ಮಾಡಲಿಲ್ಲ. ಅವನು ಸ್ನೇಹಿತನ ಸುಖದಲ್ಲಿ ಪಾಲುಗೊಂಡಂತೆ ದುಃಖದಲ್ಲೂ ಪಾಲುಗೊಂಡು ಅವನೊಡನೆ ನಿಂತನು.

ಅಂದು ಷಷ್ಠಿ. ವಿದೂಷಕನು ಚಾರುದತ್ತನ ಪೂಜೆಗೋಸ್ಕರ ಹೂವು ಮತ್ತು ನವಿರಾದ ಬಟ್ಟೆಯನ್ನು ತೆಗೆದುಕೊಂಡು ಬಂದನು. ಹಿಂದೆ ಚಾರುದತ್ತನು ಷಷ್ಠಿಯನ್ನು ಬಹು ವಿಜೃಂಭಣೆಯಿಂದ ಮಾಡುತ್ತಿದ್ದನು. ಇಂದು ತಾನು ಕಡುಬಡವನಂತೆ ಮಾಡಬೇಕಾಯಿತಲ್ಲ ಎಂದು ಅವನು ಸಂಕಟದಿಂದ ನಿಟ್ಟುಸಿರಿ ಟ್ಟನು. ತನ್ನ ದೀನಾವಸ್ಥೆಯನ್ನು ಕಂಡು ಅವನಿಗೇ ಕನಿಕರವುಂಟಾಯಿತು. ತನ್ನ ಸಂಪತ್ತು ಕರಗಿದುದಕ್ಕೆ ಅವನಿಗೆ ಎಳ್ಳಷ್ಟೂ ವ್ಯಸನವಿಲ್ಲ. ಆದರೆ ತಾನು ಹಿಂದಿನಂತೆ ಔದಾರ್ಯದಿಂದ ವರ್ತಿಸುವುದಕ್ಕೆ ಸಾಧ್ಯವಾಗಲಿಲ್ಲವಲ್ಲ ಎಂಬುದೇ ಅವನ ಕೊರಗಾಗಿತ್ತು. ಅವನ ಐಶ್ವರ್ಯ ಹಾಳಾಗಿದ್ದರೂ ಅವನ ಸದ್ಗುಣಗಳು ಉಳಿದಿದ್ದವು.

"ಹಸ್ತಿಯಲ್ಲಿ ನಾನು ಹಾಕಿದ ಹೇರಳವಾದ ಬಲಿದಾನದ ಧಾನ್ಯವನ್ನು ಹಂಸ, ಸಾರಸಪಕ್ಷಿಗಳ ಹಿಂಡು ತಿಂದು ತಣಿಯುತ್ತಿದ್ದುವು. ಇಂದು ಕೀಟಗಳಿಗೂ ಸಾಲದ ಹಿಡಿಧಾನ್ಯವನ್ನು ಹಾಕುವಂತಾಯಿತು. ದರಿದ್ರನಾದ ಮಾನಿಷ್ಟ ಬದುಕಿದ್ದರೂ ಸತ್ತವನಂತೆ." ಹೀಗೆಂದು ಚಾರುದತ್ತನು ಕೊರಗುತ್ತಾ ವ್ಯಸನಪಡತೊಡಗಿದನು.

"ನೀನು ಸಮುದ್ರದೆಲ್ಲೆಯವರೆಗಿನ ಜನರಿಗೆಲ್ಲ ದಾನಮಾಡಿ ಸಂಪತ್ತನ್ನು ಕಳೆದುಕೊಂಡರೂ ಬಹುಳಪಕ್ಷದ ಬೆಳುದಿಂಗಳಂತೆ ನಿನ್ನ ಬಡತನ ರಮಣೀಯವಾಗಿದೆ" ಎಂಬುದು ವಿದೂಷಕನ ಸಮಾಧಾನ.

ಆದರೂ ಚಾರುದತ್ತನು "ದುಃಖವನ್ನು ಅನುಭವಿಸಿದ ಮೇಲೆ ಸುಖ ಬಂದರೆ ಕತ್ತಲೆಯಲ್ಲಿದ್ದು ಬೆಳಕನ್ನು ಕಂಡಂತೆ ಶೋಭಿಸುತ್ತದೆ. ನನಗಾದರೋ ಸುಖ ಹೋಗಿ ದುಃಖ ಬಂದಿದೆ" ಎಂದು ಮರುಗಿದನು.

"ನಿನ್ನ ಅಪಾರ ಐಶ್ವರ್ಯವೆಲ್ಲಾ ಏನಾಯಿತು?" ವಿದೂಷಕನು ನೊಂದು ಪ್ರಶ್ನಿಸಿದನು.

"ಅದೂ ಕೂಡ ನನ್ನ ಅದೃಷ್ಟದೊಡನೆ ಹೋಯಿತು. ಮಿತ್ರರಿಗಾಗಿ ನನ್ನ ದ್ರವ್ಯ ಕರಗಿತು. ನಾನು ಬಂದವರಾರನ್ನೂ ಬರಿಗೈಯಲ್ಲಿ ಕಳಿಸಲಿಲ್ಲ. ಸಂಪತ್ತು ಹೋದರೂ ನನ್ನ ಧೈರ್ಯ ಕುಂದಿಲ್ಲ" ಚಾರುದತ್ತನು ಉತ್ತರಿಸಿದನು.

"ಹಾಗಾದರೆ ನಿನ್ನ ಸಂಪತ್ತು ಹೋಯಿತೆಂದು ನೀನು ಕೊರಗುವೆಯ?"

"ಹಣ ಹೋಯಿತೆಂಬ ಕೊರಗಲ್ಲ. ಅದೃಷ್ಟವಿದ್ದರೆ ಅದು ಪುನಃ ಬರಬಹುದು. ದರಿದ್ರನಾದ ನನಗೆ ಇನ್ನು ಮುಂದೆ ಸಜ್ಜನರ ಸ್ನೇಹ ಸಡಿಲವಾಗಬಹುದೆಂದು ಚಿಂತೆಯಷ್ಟೆ. ಅಲ್ಲದೆ ಮೊದಲಿನಂತೆ ನೆಂಟರು ನನ್ನನ್ನು ಪ್ರೀತಿಸುವುದಿಲ್ಲ. ದರಿದ್ರನ ಧೈರ್ಯ ನಗೆಪಾಟಲಾಗುವುದು. ಹಗೆತನವಿಲ್ಲದಿದ್ದರೂ ಗೆಳೆಯರು ದೂರವಾಗುತ್ತಾರೆ. ಆಪತ್ತುಗಳು ಬೆಳೆಯುತ್ತವೆ. ಯಾರೋ ಮಾಡಿದ ಪಾಪಕರ್ಮವನ್ನು ಈ ದರಿದ್ರನೇ ಆಶೆಯಿಂದ ಮಾಡಿರಬೇಕೆಂದು ಆರೋಪಿಸುತ್ತಾರೆ."

"ಮತ್ತೆ ಮತ್ತೆ ಚಿಂತಿಸುವುದರಿಂದ ಸಂಕಟ ಹೆಚ್ಚುತ್ತದೆ. ಆದ್ದರಿಂದ ಆ ಯೋಚನೆಯನ್ನೇ ಬಿಟ್ಟುಬಿಡು."

"ಸಂಕಟಪಡಲು ನಾನೇನು ದರಿದ್ರನೆ? ನನಗೆ ಸುಕೂಲಳಾದ ಹೆಂಡತಿಯಿದ್ದಾಳೆ.

ಸುಖದುಃಖದಲ್ಲಿ ಪಾಲುಗೊಳ್ಳುವ ನೀನು ಇದ್ದೀಯೆ. ಅಲ್ಲದೆ ನನ್ನ ಧೈರ್ಯ ಇನ್ನೂ ಇದೆ. ದರಿದ್ರರಲ್ಲಿ ಇವು ಇರುವುದಿಲ್ಲ" ಚಾರುದತ್ತನು ಉತ್ತರಿಸಿದನು.

† † † †

ವಸಂತಸೇನೆಯು ಉಜ್ಜಯಿನಿ ನಗರದ ವೇಶ್ಯೆ. ಅವಳು ಹುಟ್ಟು ಚೆಲುವೆ, ಯುವತಿ. ಅವಳಿಗೆ ರತಿಯ ಜೊತೆಗೆ ಲಕ್ಷ್ಮಿಯೂ ಪ್ರಸನ್ನಳಾಗಿದ್ದಳು. ಆ ಪಟ್ಟಣದಲ್ಲಿ ಅವಳ ದರ್ಶನಕ್ಕಾಗಿ ಹಾತೊರೆಯುತ್ತಿದ್ದ ವಿಟರು ಎಷ್ಟೋ ಮಂದಿ ಯಿದ್ದರು. ಅವಳು ಒಲಿದರೆ ಅವಳಿಗೆ ಹಣವನ್ನು ಸುರಿಯುವಂಥ ಜನರಿದ್ದರು. ಮಲ್ಲಿಗೆಗೆರಗಿದ ದುಂಬಿ ಸಂಪಿಗೆಗೆ ಮನ ಸೋಲುವುದೆ? ಅವಳು ಗುಣವನ್ನು ಮೆಚ್ಚಿದಳೇ ಹೊರತು ಚರಿತ್ರಹೀನರನ್ನಾಗಲೀ, ಹೊನ್ನನ್ನಾಗಲೀ ಅಲ್ಲ. ಅವಳಲ್ಲಿ ಮೋಹಗೊಂಡು ಅವಳ ಬೆನ್ನುಹತ್ತಿದವರ ಪೈಕಿ ಶಕಾರನೂ ಒಬ್ಬನು.

ಈ ಶಕಾರನು ಉಜ್ಜಯಿನಿಯ ಅರಸನ ಭಾವನಾಗಿದ್ದ. ಅವನಿಗೆ ರಸಿಕ ವಿಟನೊಬ್ಬನು ಸ್ನೇಹಿತನಾಗಿದ್ದ. ಅವನ ಜೊತೆಯಲ್ಲಿ ಇವನು ಕೂಡಿಕೊಂಡು ವಸಂತಸೇನೆ ಯನ್ನು ಹಿಂಸಿಸುತ್ತಿದ್ದನು.

ಆದರೆ ವಸಂತಸೇನೆಯು ಚಾರುದತ್ತನಿಗೆ ಮಾರುಹೋಗಿದ್ದಳು. ಅವಳು ಅವನನ್ನು ಮನಸಾರೆ ಪ್ರೀತಿಸುತ್ತಿದ್ದಳು.

ಒಮ್ಮೆ ಉಜ್ಜಯಿನಿಯಲ್ಲಿ ಕಾಮದೇವನ ಉತ್ಸವ ನಡೆಯಿತು. ಅದಕ್ಕೆ ವಸಂತ ಸೇನೆಯು ಹೋಗಿದ್ದಳು. ಚಾರುದತ್ತ, ವಿದೂಷಕರೂ ಉತ್ಸವಕ್ಕೆ ಹೋಗಿದ್ದರು. ಅವಳು ಚಾರುದತ್ತನ ದಾನಶೀಲತೆ ಮತ್ತು ಔದಾರ್ಯ ಗುಣವನ್ನು ಕೇಳಿದ್ದಳು. ಕಾಮದೇವನ ಉತ್ಸವವು ಅವಳ ಕಣ್ಣಿಗೆ ಹಬ್ಬವಾಯಿತು. ಚಾರುದತ್ತ ವಸಂತ ಸೇನೆಯರಿಗೆ ಪ್ರಥಮದರ್ಶನದಲ್ಲೇ ಪ್ರೀತಿ ಮೊಳೆಯಿತು. ಅವಳು ತನ್ನ ಪ್ರಿಯ ನನ್ನು ಮನಸಾರ ಪ್ರೀತಿಸಿದಳು. ಚಾರುದತ್ತನೂ ಅವಳನ್ನು ಪ್ರೀತಿಸಿ ಅವಳನ್ನು ಸ್ಮರಿಸಿಕೊಂಡು ಆಗಾಗ್ಗೆ ವಿದೂಷಕನೊಡನೆ ಅವಳನ್ನು ಕುರಿತು ಮಾತನಾಡು ತ್ತಿದ್ದನು.

ಒಂದು ಸಂಜೆಗತ್ತಲಿನಲ್ಲಿ ವಸಂತಸೇನೆಯು ತನ್ನ ಸಖಿಯರೊಡನೆ ರಾಜಮಾರ್ಗ ದಲ್ಲಿ ಬರುತ್ತಿದ್ದಳು. ಅವಳ ಚಲನವಲನವನ್ನೇ ಕಾಯುತ್ತಿದ್ದ ಶಕಾರ ಮತ್ತು ವಿಟನು ಅವಳನ್ನು ದಾರಿಯಲ್ಲಿ ಅಡ್ಡಗಟ್ಟಿದನು. ವಸಂತಸೇನೆಯ ಸಖಿಯರು ಕಾಲಿಗೆ ಬುದ್ಧಿ ಹೇಳಿದರು. ವಸಂತಸೇನೆಯೂ ದಿಗಿಲಿನಿಂದ ಓಡತೊಡಗಿದಳು.

ಶಕಾರ ಮತ್ತು ವಿಟನು ಅವಳ ಬೆನ್ನು ಹತ್ತಿದರು. ಅವಳ ಸಖಿಯರು ಕತ್ತಲೆಯಲ್ಲಿ ಕಾಣದಾದರು. ಅವಳು ನಿರ್ಜನ ರಾಜಮಾರ್ಗದಲ್ಲಿ ಏದುತ್ತಾ ಓಡುತ್ತಿದ್ದಳು. ಅವಳನ್ನು ಹಿಂಬಾಲಿಸಿ ಶಕಾರನು ಪ್ರೇಮಾಲಾಪನೆಗೆ ಆರಂಭಿಸಿದನು. "ಲೇ ವಸಂತಸೇನೆ ನಿಲ್ಲು, ಯಾಕೆ ಓಡಿ ಹೋಗುವೆ. ನನ್ನ ಮೇಲೆ ದಯೆತೋರಿ ನಿಲ್ಲು, ಕೆಂಡದಲ್ಲಿ ಬಿದ್ದ ಚಕ್ಕಳದ ಚೂರಿನಂತೆ ನನ್ನ ಮೈಯೆಲ್ಲ ಕಾಮದಿಂದ ಸುಡುತಿದೆ." ಶಕಾರನು ಕಾಮೋದ್ರೇಕವನ್ನು ನಟಿಸುತ್ತ ತೋಳನ್ನು ಅವಳತ್ತ ಮುಂಚಾಚಿ ಹೇಳಿದನು.

ಅವಳನ್ನು ಕುರಿತು ವಿಟನು ನುಡಿದನು. "ಬೆಂಬತ್ತಿ ಬಂದ ಹುಲಿಗೆ ಹೆದರಿದ ಜಿಂಕೆಯಂತೆ ನೃತ್ಯಕೌಶಲದಿಂದ ಪಾದಗಳನ್ನಿಡುತ್ತ ಭಯಾಕ್ರಾಂತ ಚಂಚಲ ನೋಟವನ್ನು ಬೀರಿ ನೀನೇಕೆ ಓಡುವೆ ವಸಂತಸೇನೆ? ನಿಲ್ಲು ನಿಲ್ಲು".

ಒಮ್ಮೆಯೂ ವಸಂತಸೇನೆ ಹಿಂದಿರುಗಿ ನೋಡಲಿಲ್ಲ. ಇನ್ನೆಲ್ಲಿ ಸಿಕ್ಕಿ ಬೀಳುವೆನೋ ಎಂಬ ಹೆದರಿಕೆಯಿಂದ ನಡುಗುತ್ತಾ ಮುಂದೆ ಮುಂದೆ ಓಡುತ್ತಿದ್ದಳು, ಅವಳು. "ಭಾವ, ನಾಯಿಗಳು ಅಟ್ಟಿಸಿಕೊಂಡು ಬಂದರೆ ಓಡುವ ಹೆಣ್ಣು ನರಿಯಂತೆ ವಸಂತಸೇನೆ ಓಡುತ್ತಿದ್ದಾಳೆ." ಶಕಾರನು ವಿಟನನ್ನು ಕುರಿತು ಹೇಳಿದನು.

ವಿಟನು ವಿವರಿಸಿದನು. "ವಸಂತಸೇನೆ ಗರುಡನಿಗಂಜಿದ ಸರ್ಪಿಣಿಯಂತೆ ಅಡಿಗೆ ನೂರಡಿಯಿಡುತ್ತಾ ಯಾಕೆ ಓಡುವೆ? ನಾನಾದರೋ ವೇಗದಲ್ಲಿ ಗಾಳಿಗೆ ಸಮ. ನಾನು ವೇಗದಿಂದ ಬಂದು ನಿನ್ನನ್ನು ಹಿಡಿಯಲಾರೆನೇನು?"

ವಸಂತಸೇನೆಗೆ ಭಯ ಇನ್ನೂ ಹೆಚ್ಚಾಯಿತು. ಅವಳು ಸುತ್ತಲೂ ನೋಡುತ್ತ ಪರಭೃತಿಕೆ, ಪಲ್ಲವಕೆ, ಶಾರಿಕೆ ಮೊದಲಾದ ತನ್ನ ಸಖಿಯರನ್ನು ಹೆಸರು ಹಿಡಿದು ಕೂಗುತ್ತಿದ್ದಳು. ಆದರೆ ಯಾರೂ ಅವಳ ಕೂಗಿಗೆ ಓಗೊಡಲಿಲ್ಲ.

ಅಷ್ಟರಲ್ಲಿ ಶಕಾರನು ಅವಳನ್ನು ಸಮೀಪಿಸಿದನು. "ಎಲೆ ಹೆಣ್ಣೆ ವಸಂತಸೇನೇ. ಪಲ್ಲವಿಕೆಯನ್ನಾದರೂ ಕೂಗು, ಪರಭೃತಿಕೆಯನ್ನಾದರೂ ಕೂಗು. ಸರ್ವವಸಂತಮಾಸವನ್ನೇ ಬೇಕಾದರೆ ಕೂಗು. ಯಾರು ನಿನ್ನನ್ನು ರಕ್ಷಿಸುವರೋ ನೋಡಿಬಿಡುತ್ತೇನೆ. ನಿನ್ನನ್ನು ಯಾರು ಬಿಡಿಸುವರು? ಸ್ತ್ರೀಶಾಸನನಾತಿ ವಾಸುದೇವನೇ? ಇಲ್ಲ ಕುಂತಿಯ ಮಗ ಜನಮೇಜಯನೆ? ದುಶ್ಶಾಸನ ಸೀತೆಯನ್ನು ಹಿಡಿದಿದ್ದಂತೆ ನಾನು ನಿನ್ನ ಕೂದಲನ್ನು ಹಿಡಿದು ಎಳೆತರುತ್ತೇನೆ" ಪರಿಹಾಸದಿಂದ ಅವನು ಅಂದನು.

"ವಸಂತಸೇನೆ ನನಗೆ ಭಯ ತಿಳಿಯದು. ನನ್ನ ಕಸುಬಿನಿಂದಾಗಿ ಕತ್ತಿ ಹಿಡಿದು ನನಗೆ ಒಗ್ಗಿ ಹೋಗಿದೆ, ನಿನ್ನಂತಹ ತರುಣಿಗೆ ಇದನ್ನು ಹೇಳಬಾರದು. ನನ್ನ ಸಾಮರ್ಥ್ಯಕ್ಕೆ ಪೇಟೆಯ ಕಾವಲುಗಾರರೇ ಸಾಕ್ಷಿ". ವಿಟನ ಈ ಮಾತನ್ನು ಕೇಳಿ ವಸಂತಸೇನೆಯ ಎದೆ ಭಯದಿಂದ ತುಡಿಯತೊಡಗಿತು.

ಮತ್ತೆ ವಿಟನು ಮಾತನ್ನು ಮುಂದುವರಿಸಿದನು. "ವಸಂತಸೇನೆ ನನ್ನ ಪ್ರೇಮವನ್ನು ಒಪ್ಪಿಕೊ. ಇಲ್ಲದಿದ್ದರೆ ನನಗೆ ಕೋಪ ಕೆರಳುತ್ತೆ. ಒಮ್ಮೆ ಕೆರಳಿದರೆ ನಾವು ಏನು ಮಾಡುವುದಕ್ಕೂ ಹಿಂಜರಿಯುವುದಿಲ್ಲ. ನೀನು ಪ್ರೀತಿಸಿದರೆ ನನ್ನಿಂದಾಗುವ ಹೆಣ್ಣಿನ ಕೊಲೆ ತಪ್ಪುತ್ತೆ. ನೀನೂ ಬದುಕುತ್ತೀಯೆ."

"ಹೌದು, ಭಾವ ಸರಿಯಾಗಿ ಹೇಳ್ತಾನೆ. ಅವನ ಮಾತನ್ನು ಕೇಳು. ನೋಡು, ಮನಸ್ಸನ್ನ ಕೆಡಿಸಬ್ಯಾಡ. ಶಕ್ತನಾದ ನನ್ನ ಪ್ರೇಮವನ್ನು ಒಪ್ಪಿಕೊ. ಇಲ್ಲದಿದ್ರೆ ಇಲ್ಲಿ ನೋಡು ಕತ್ತಿ ಚೂಪಾಗಿದೆ. ನವಿಲಿನ ಕತ್ತಿನಂತೆ ಕಪ್ಪಾಗಿದೆ. ಶಾಕ ಮಾಡು, ನನ್ನಂಥವರನ್ನು ಶಿಕ್ಷೆಗೆ ಒಳಪಡಿಸಬ್ಯಾಡ. ಇದರಿಂದ ಕೊಂದುಹಾಕುತ್ತೀನಿ." ಹೀಗೆ ಶಕಾರನು ನುಡಿದು ನಡುವಿನಲ್ಲಿ ಜೋತುಬಿದ್ದ ಒರೆಯಿಂದ ಸೆಳೆದಿದ್ದ ಕತ್ತಿಯನ್ನು ಎತ್ತಿ ತೋರಿದನು.

ಭಯದಿಂದ ವಸಂತಸೇನೆಯು ಅವನನ್ನು ಅನುನಯದಿಂದಲೇ ಬಗ್ಗಿಸುವುದಕ್ಕಾಗಿ "ಆರ್ಯ, ಕುಲೀನರ ಶೀಲ ತೃಪ್ತಿಗಳನ್ನು ಆಶ್ರಯಿಸಿ ಬದುಕುವ ವೇಶ್ಯೆ ನಾನು. ನಿಮಗೆ ನನ್ನ ದೇಹ ಬೇಕೋ, ಅಲಂಕಾರ ಬೇಕೋ" ಎಂದು ಪ್ರಶ್ನಿಸಿದಳು.

ವಿಟ ಹೇಳಿದನು "ಅಲಂಕಾರ ಬೇಡ. ಬಳ್ಳಿಯಿಂದ ಹೂ ಕೀಳುವುದು ಉಚಿತವಲ್ಲ."

"ವಸಂತಸೇನೆ ನಾನು ದೊರೆಯ ಮಗ. ನನ್ನನ್ನು ಪ್ರೀತಿಸು ಬಾ" ಶಕಾರನು ಗೋಗರೆದನು.

"ನೀನು ಹಾಳಾಗು" ವಸಂತಸೇನೆಯು ಅವನನ್ನು ಶಪಿಸಿದಳು.

ವಸಂತಸೇನೆಯು ಪ್ರೀತಿಸುವಳೆಂದು ಶಕಾರನಿಗೆ ಅತ್ಯಾನಂದ.

"ನೀನು ಮೂರ್ಖೆ. ನಿನ್ನ ಕಸುಬಿಗೆ ವಿರುದ್ಧವಾಗಿ ನೀನು ಮಾತಾಡುತ್ತೀಯೆ. ನೀನು ದಾರಿಯಲ್ಲಿರುವ ಬಳ್ಳಿಯಂತೆ. ಹಣಕ್ಕೆ ಮೈಮಾರುವವಳು. ಹಣ ಕೊಟ್ಟು ಕೊಳ್ಳುವವನನ್ನು ನೀನು ಉಪಚರಿಸು" ವಿಟನು ಅವಳಿಗೆ ಹೇಳಿದನು.

"ನಾನು ಕುಲಧರ್ಮಕ್ಕನುಸಾರವಾಗಿ ಕುಲೀನರ ಸೇವೆ ಮಾಡುತ್ತೇನೆ"—

ವಸಂತಸೇನೆಯು ಮಾತನಾಡುತ್ತಲೇ ಮುಂಬರಿಯುತ್ತಾ ರಾಜಮಾರ್ಗದ ಕೆಳದ ಬೀದಿಗೆ ಬಂದಿದ್ದಳು.

ಶಕಾರನು ವ್ಯಂಗ್ಯವಾಗಿ ಹೇಳಿದನು. "ಭಾವ, ಈ ಬೀದಿಯಲ್ಲಿ ಕಗ್ಗತ್ತಲು ಕವಿದಿದೆ. ಇಲ್ಲಿ ಹೆಣ್ಣು ತಪ್ಪಿಸಿಕೊಂಡಾಳು. ಕಾಮನ ಹಬ್ಬವಾದಾಗಿನಿಂದ ಆ ದರಿದ್ರ ವರ್ತಕನ ಮಗ ಚಾರುದತ್ತನನ್ನು ಈ ಹೆಣ್ಣು ಕಾಮಿಸುತ್ತಿದ್ದಾಳೆ. ಇದೇ ಅವನ ಮನೆಯ ಬಾಗಿಲು."

ನೀರಿನಲ್ಲಿ ಮುಳುಗಿ ಮೀನು ಹಿಡಿಯುವವನಿಗೆ ಮುತ್ತು ಸಿಕ್ಕಿದಂತಾಯಿತು ವಸಂತಸೇನೆಗೆ, ಶಕಾರನ ಮಾತನ್ನು ಕೇಳಿ. 'ಇದು ಆತನ ಮನೆಯೇ? ದುಷ್ಟರ ಕೆಡುಕು ಶುಭವಾಗಿ ಪರಿಣಮಿಸಿತು' ಎಂದು ಅವಳು ತನ್ನಲ್ಲೇ ಹೇಳಿಕೊಳ್ಳುತ್ತಾ ಮೆಲ್ಲಗೆ ಚಾರುದತ್ತನ ಮನೆಯ ಬಾಗಿಲಿನತ್ತ ಹೊರಟಳು.

ಅವರು ಕತ್ತಲೆಯಲ್ಲಿ ಕಾಣದಾದ ವಸಂತಸೇನೆಯನ್ನು ಹುಡುಕತೊಡಗಿದರು. ಅವಳು ಎಷ್ಟೇ ಮೆಲ್ಲಗೆ ಹೆಜ್ಜೆಯಿಟ್ಟು ನುಸುಳಿಕೊಳ್ಳಲು ಹವಣಿಸಿದರೂ ಅವಳ ತೊಡಿಗೆಗಳೇ ಅವಳಿಗೆ ಹಗೆಗಳಾದುವು. ಅವಳು ಹೆಜ್ಜೆಯಿಕ್ಕಿದಂತೆ ಅವು ದನಿ[illegible]ದುವು. ಅವಳ ಶರೀರದ ನರುಗಂಪು ಅವಳ ತಾವನ್ನು ತೋರಿಸಿತು. ಚ[illegible]ನು ಮೃಗವಾಸನೆಯನ್ನು ಹಿಡಿದು ಮುಂಬರಿಯುವ ಬೇಟೆನಾಯಿಯಂತೆ ಅವಳತ್ತ ಸಾಗಿದನು. ಇನ್ನು ಹೆಚ್ಚು ತಡಮಾಡಿದರೆ ತೊಂದರೆಯೆಂದು ಅವಳು ಯೋಚಿಸಿ ತನ್ನ ಮುಡಿಯ ಹೂ ಕುಚ್ಚನ್ನು ಕಿತ್ತು ಬಿಸುಟಳು. ಒಡವೆಗಳನ್ನು ಮೆಲ್ಲಗೆ ಬಿಚ್ಚಿ ಅವಳು ಸೆರಗಿನಲ್ಲಿ ಕಟ್ಟಿದಳು. ಅನಂತರ ಗೋಡೆಯುದ್ದಕ್ಕೂ ಬಾಗಿಲನ್ನು ಅರಸುತ್ತಾ ಕಳ್ಳಹೆಜ್ಜೆಯಿಕ್ಕತೊಡಗಿದಳು. ಸುಣ್ಣಬಣ್ಣಗಳಿಲ್ಲದ ಆ ಗೋಡೆ ಕತ್ತಲೆಯಲ್ಲಿ ಅವರಿಗೆ ಕಾಣಿಸುತ್ತಿರಲಿಲ್ಲ.

ಅದೇ ಹೊತ್ತಿನಲ್ಲಿ ಚಾರುದತ್ತನು ವಿದೂಷಕ ಮೈತ್ರೇಯನಿಗೆ ಚೌಕದಲ್ಲಿದ್ದ ಮಾತೃದೇವತೆಗಳಿಗೆ ಬಲಿಯನ್ನು ಕೊಂಡೊಯ್ಯಲು ಹೇಳುತ್ತಿದ್ದನು. ತನಗೆ ಬಲಿಯಲ್ಲಿ ಶ್ರದ್ಧೆಯಿಲ್ಲವೆಂದೂ, ತಾನೊಬ್ಬನೇ ಹೋಗಲಾರೆನೆಂದೂ ಮೈತ್ರೇಯನು ಆಕ್ಷೇಪಿಸಿದನು. ಚಾರುದತ್ತನು ಚೇಟಿ ರದನಿಕೆಯನ್ನು ವಿದೂಷಕನೊಡನೆ ಕಳಿಸಿದನು. ಅವರಿಬ್ಬರೂ ದೀಪವನ್ನು ಹಿಡಿದು ಮನೆಯ ಹಿಂಬಾಗಿಲಿಗೆ ಬಂದು ಬಾಗಿಲನ್ನು ತೆಗೆದಾಗ ಅಲ್ಲಿಯೇ ನಿಂತಿದ್ದ ವಸಂತಸೇನೆಯು ಸೆರಗಿನಿಂದ ಗಾಳಿ ಬೀಸಿ ದೀಪವನ್ನು ಆರಿಸಿಬಿಟ್ಟಳು. ಅದು ಅವರಿಗೆ ತಿಳಿಯಲಿಲ್ಲ, ಗಾಳಿಗೆ ದೀಪ ನಂದಿತೆಂದು ಅವರು ಅಂದುಕೊಂಡರು. ಚೌಕದಲ್ಲಿ ಕಾದುಕೊಂಡಿದ್ದನು

ರದನಿಕೆಗೆ ಮೈತ್ರೇಯನು ಹೇಳಿ ದೀಪವನ್ನು ಹಚ್ಚಿ ತರಲು ಒಳಕ್ಕೆ ಹೋದನು. ಹಿಂಬಾಗಿಲು ತೆರೆದಿತ್ತು. ಈಗ ವಸಂತಸೇನೆಯು ನಿರ್ಭಯಳಾಗಿ ಮನೆಯೊಳಕ್ಕೆ ಹೋಗಿ ನಿಂತುಕೊಂಡಳು.

ವಸಂತಸೇನೆಯನ್ನು ಅರಸುತ್ತಾ ಬೀದಿಯಲ್ಲಿ ನಿಂತಿದ್ದ ವಿಟನು ರದನಿಕೆಯನ್ನು ನೋಡಿ ಶಕಾರನನ್ನು ಕುರಿತು "ಸ್ನಾನಧೂಪದ ಸರುಗಂಪು ಬರುವಂತಿದೆ" ಎಂದನು.

"ಹೌದು ಭಾವ. ಈ ವಾಸನೆಯನ್ನು ಕೇಳುತ್ತಿದ್ದೇನೆ, ನನ್ನ ಕಿವಿಗಳಿಂದ. ಕತ್ತಲೆ ತುಂಬಿರುವ ಮೂಗಿನ ಹೊಳ್ಳೆಗಳಿಂದ ನಾನು ನೋಡಲಾರೆ"—ಶಕಾರನು ಉತ್ತರಿಸಿದನು.

ವಿಟನು ಕರೆಯುತ್ತಾ ರದನಿಕೆಯನ್ನು ಹಿಡಿದುಕೊಂಡನು. ಭೀತಿಯಿಂದ ರದನಿಕೆ ನೆಲಕ್ಕುರುಳಿದಳು.

"ಭಾವ, ಹಿಡಿದಿಕೊ ಹಿಡಿದಿಕೊ" ಶಕಾರ ಕೂಗುತ್ತಾ "ಇವಳ ತಲೆ ಕತ್ತರಿಶಿ ಆವೇಲಿ ಶಾಯಿಶಿ ಬಿಡುತ್ತೇನೆ" ಎಂದು ಅವಳ ಮುಂದಲೆಯನ್ನು ಹಿಡಿದನು. ಅನಂತರ "ಮಹೇಶ್ವರನ್ನ, ಶಂಕರನ್ನ, ಈಶ್ವರನ್ನ, ಯಾರನ್ನಾದರೂ ಕರೆದು ಕೂಗಾಡು, ಗೋಳಾಡು" ಎಂದು ಅವನು ಅವಳ ಮುಂದಲೆಯನ್ನು ಎಳೆದನು. "ಅಯ್ಯೋ ಏನು ಮಾಡುತ್ತೀರಿ" ಎಂದು ರದನಿಕೆಯು ಕೂಗಿಕೊಂಡಳು.

ಅವಳ ಧ್ವನಿಯನ್ನು ಕೇಳಿ ಶಕಾರನಿಗೆ ಅನುಮಾನವಾಯಿತು. ಆದರೆ ವಿಟನಿಗೆ ಇನ್ನಷ್ಟು ತಮಾಷೆ ಮಾಡಬೇಕೆಂದು ಇಷ್ಟ. ಆದ್ದರಿಂದ ಅವನು "ಧ್ವನಿ ಬದಲಾಯಿಸಿ ಮಾತಾಡುತ್ತಿದ್ದಾಳೆ. ಬಿಡಬೇಡ" ಎಂದನು.

ಅಷ್ಟರಲ್ಲಿ ವಿದೂಷಕನು ದೀಪವನ್ನು ಹಿಡಿದುಕೊಂಡು ಬಂದನು. ವಿಟನು ಬೆಳಕಿನಲ್ಲಿ ವಿದೂಷಕನನ್ನು ಗುರುತಿಸಿ ಅವನ ಕ್ಷಮೆ ಕೇಳಿ ಈ ಸುದ್ದಿಯನ್ನು ಚಾರುದತ್ತನಿಗೆ ಹೇಳಬಾರದೆಂದು ಬೇಡುತ್ತಾ ಅಲ್ಲಿಂದ ಹೊರಟನು. ಶಕಾರನಿಗೆ, ಈ ಭಾವನೇಕಿಷ್ಟು ಚಾರುದತ್ತನಿಗೆ ಹೆದರುವನೆಂದು ಸೋಜಿಗವಾಯಿತು.

ಶಕಾರನೂ ವಿಟನೊಡನೆ ನಿರಾಶೆಯಿಂದ ಹೋಗಬೇಕಾಯಿತು. ಅವನು ಹೋಗುವಾಗ ಸುಮ್ಮನೆ ಹೋಗಲಿಲ್ಲ. ವಿದೂಷಕನಿಗೆ ಹೀಗೆ ಎಚ್ಚರಿಕೆಯಿತ್ತು ಹೋದನು. "ಎಲೆ ಹೈದ, ಆ ದರಿದ್ರ ವರ್ತಕ ಚಾರುದತ್ತ ಹೈದನಿಗೆ ಹೇಳು. ವಶಂತಶೇನೆಯೆಂಬ ಶೂಳೆಹೆಣ್ಣು ನಾವು ಬಲವಂತದಿಂದ ಹಿಡಿದೊಯ್ಯುತ್ತಿರುವಾಗ ಬಂಗಾರದ ಒಡವೆಯೊಡನೆ ನಿನ್ನ ಮನೆಯನ್ನು ಹೊಕ್ಕಳು. ಅವಳನ್ನು ನಾಳೆ ನನಗೆ

ತಂದೊಪ್ಪಿಸಬೇಕು. ಇಲ್ಲದೆ ಹೋದರೆ ನಮ್ಮಿಬ್ಬರಿಗೂ ದೊಡ್ಡ ಮನಸ್ತಾಪವಾಗುತ್ತೆ. ಬಾಗಿಲಿಗೆ ಸಿಕ್ಕಿದ ಬೇಲದ ಹಣ್ಣಿನಂತೆ ನಿನ್ನ ತಲೆಯನ್ನು ಪುಡಿಪುಡಿ ಮಾಡಿಬಿಡುತ್ತೇನೆಂದು ಹೇಳಿದೆನೆಂದು ಅವನಿಗೆ ಹೇಳು." ಶಕಾರನು ವಿಟನನ್ನು ಹಿಂಬಾಲಿಸಿದನು. ಈ ಸಂಗತಿಯನ್ನು ಯಾರಿಗೂ ತಿಳಿಸಬಾರದೆಂದು ಅವರು ಮಾತನಾಡಿಕೊಂಡು ಹೋದರು.

ಚಾರುದತ್ತನು ಮನೆಯಂಗಳದಲ್ಲಿ ನಿಂತಿದ್ದನು. ವಸಂತಸೇನೆ ಕತ್ತಲೆಯಲ್ಲಿ ಅಂಗಳಕ್ಕೆ ಬಂದಾಗ ರದನಿಕೆಯೇ ಬಂದಳೆಂದು ಅವನು ಅಂದುಕೊಂಡನು. ಆದ್ದರಿಂದ ಅವನು ತನ್ನ ಬೆನ್ನ ಹಿಂದೆ ನಿಂತಿದ್ದ ವಸಂತಸೇನೆಯನ್ನು ತಿರುಗಿನೋಡದೆ "ಪೂಜೆಯಾಯಿತೆ?" ಎಂದು ಪ್ರಶ್ನಿಸಿದನು. ಅವಳು ಉತ್ತರವೀಯಲಿಲ್ಲ. ಕೆಲವು ಕ್ಷಣಗಳು ಮೌನವಾಗಿ ಕಳೆದುವು.

"ಸೆಕೆಯಾಗುತ್ತಿದೆ. ಈ ಉತ್ತರೀಯವನ್ನು ತೆಗೆದುಕೊ" ಚಾರುದತ್ತನು ಹೇಳುತ್ತಾ ತಾನು ಹೊದೆದಿದ್ದ ಉತ್ತರೀಯವನ್ನು ತಿರುಗಿ ನೋಡದಂತೇ ತೆಗೆದು ಅವಳತ್ತ ನೀಡಿದನು. ವಸಂತಸೇನೆಯು ಸಂತೋಷದಿಂದ ಮೌನವಾಗಿ ಅವನು ನೀಡಿದ ಉತ್ತರೀಯವನ್ನು ತೆಗೆದುಕೊಂಡಳು.

ಅನಂತರ ಚಾರುದತ್ತನು "ರದನಿಕೆ, ನೀನು ಒಳಗೆ ಹೋಗು" ಎಂದನು. ವಸಂತಸೇನೆಯು ಸುಮ್ಮನಿದ್ದಳು. ಅವನು ಮತ್ತೆ "ಏನು ನೀನು ಹೋಗುವುದಿಲ್ಲವೆ?" ಎಂದು ಪ್ರಶ್ನಿಸಿದನು.

ವಸಂತಸೇನೆಗೆ ಈಗೇನು ಮಾಡಬೇಕೆಂದು ತಿಳಿಯದೆ ನೀರವವಾಗಿದ್ದಳು. ಅವನು ಪುನಃ "ಹೋಗದೆ ಏಕೆ ತಡಮಾಡುವೆ?" ಇದಕ್ಕೂ ಅವಳು ಪ್ರತಿಯಾಡದೆ ಸುಮ್ಮನಿದ್ದಳು.

ಅಷ್ಟರಲ್ಲಿ ರದನಿಕೆ, ಮೈತ್ರೇಯರು ಅಂಗಳಕ್ಕೆ ಬಂದರು. ಚಾರುದತ್ತನು ದೀಪದ ಬೆಳಕಿನಲ್ಲಿ ವಸಂತಸೇನೆಯನ್ನು ನೋಡಿದನು. ಅವಳೂ ನೋಡಿದಳು. ಮೈತ್ರೇಯನು ಏದುತ್ತಾ ಶಕಾರನ ಸಂದೇಶವನ್ನು ಚಾರುದತ್ತನಿಗೆ ಹೇಳಿದನು. ವಸಂತಸೇನೆಯು ಇದೇ ಸಕಾಲವೆಂದು ಚಾರುದತ್ತನಿಗೆ ಮರೆಹೊಕ್ಕಳು

ವಸಂತಸೇನೆಯನ್ನು ಕಂಡು ಚಾರುದತ್ತನಿಗೆ ಅಚ್ಚರಿ. ಅಲ್ಲದೆ ತನ್ನ ದುರ್ಗತಿಯನ್ನು ನೆನೆದು ಸಂಪತ್ತೆಲ್ಲ ಕರಗಿದ ಮೇಲೆ ತನ್ನ ಪ್ರೇಮ ಬಡವನ ಕೋಪದಂತೆ ವ್ಯರ್ಥವೆಂದು ಮೈತ್ರೇಯನೊಡನೆ ಉಸುರಿದನು. ಅನುಮಾನವಿಲ್ಲದೆ ಮನೆಗೆ

ಬಂದುದಕ್ಕೆ ವಸಂತಸೇನೆಯು ಕ್ಷಮೆ ಕೇಳಿದಳು. ಹಾಗೆಯೇ ಚಾರುದತ್ತನು ಕೂಡ ಅವಳನ್ನು ದಾಸಿಯಂತೆ ನಡೆಸಿಕೊಂಡುದಕ್ಕೆ ಅವಳ ಕ್ಷಮೆ ಕೇಳಿದನು.

"ನಾನು ನಿನ್ನವನು. ನಿನ್ನ ಮೇಲಿನ ಪ್ರೀತಿಗಾಗಿ ನಾನೇನು ಮಾಡಲಿ?" ಚಾರುದತ್ತನು ಅವಳನ್ನು ಕೇಳಿದನು. ಅವಳು "ಈ ಒಡವೆಗಳನ್ನು ಇಟ್ಟಿರಿ" ಎಂದು ಒಡವೆಗಳನ್ನು ಸೆರಗಿನಿಂದ ಬಿಚ್ಚಿ ಕೊಟ್ಟಳು. ಆ ಒಡವೆಗಳನ್ನು ವಿದೂಷಕನು ತೆಗೆದುಕೊಂಡನು. ಅನಂತರ ಆಗತಾನೇ ಹುಟ್ಟಿದ ತಿಂಗಳಬೆಳಕಿನಲ್ಲಿ ವಸಂತಸೇನೆಯು ತನ್ನ ಮನೆಗೆ ವಿದೂಷಕನೊಡನೆ ಹೋದಳು.

ವಸಂತಸೇನೆಯು ಮನೆಗೆ ಹೋದಮೇಲೆ ಸದಾ ಅವಳ ಮನಸ್ಸು ಚಾರುದತ್ತನನ್ನು ಕುರಿತು ಚಿಂತಿಸುತ್ತಿತ್ತು. ಅವಳಿಗೆ ಉಡಿಗೆ, ತೊಡಿಗೆ, ಊಟ, ಆಟಗಳಲ್ಲಿ ಅನಾಸಕ್ತಿಯುಂಟಾಯಿತು. ಒಡತಿಯ ಬದಲಾವಣೆಯನ್ನು ಗುರುತಿಸಿ ದಾಸಿಯರಿಗೆ ಒಡತಿಗೆ ಯಾರಲ್ಲೋ ಅನುರಾಗವುಂಟಾಗಿದೆಯೆಂದು ಮನವರಿಕೆಯಾಗದಿರಲಿಲ್ಲ. ಆ 'ಬಯಕೆಯ ಭಾವ' ಯಾರೆಂದು ಒಮ್ಮೆ ಆಪ್ತ ಚೇಟಿಯೊಬ್ಬಳು ವಸಂತಸೇನೆಯನ್ನು ಏಕಾಂತದಲ್ಲಿದ್ದಾಗ ಕೇಳಿಯೇ ಬಿಟ್ಟಳು.

"ಚಾರುದತ್ತ" ಎಂದು ವಸಂತಸೇನೆಯು ಹೇಳಿದಾಗ ಆ ದಾಸಿ "ಅವನು ದರಿದ್ರನಾಗಿದ್ದಾನೆ" ಎಂದು ಅಸಡ್ಡೆ ತೋರಿದಳು. ಬಡವನನ್ನು ಸೇವಿಸುವ ವೇಶ್ಯೆಗೆ ನಿಂದೆ ತಟ್ಟುವುದಿಲ್ಲ ಎಂಬುದು ವಸಂತಸೇನೆಯು ಕೊಟ್ಟ ಸಮಾಧಾನ. "ಹೂವಿಲ್ಲದ ಮಾವನ್ನು ದುಂಬಿ ಆಶ್ರಯಿಸುವುದಿಲ್ಲ" ಎಂದು ಚೇಟಿಯು ಆಕ್ಷೇಪಿಸಿದಳು. "ನಾನೇ ಅವನನ್ನು ಕಾಮಿಸಿದ್ದೇನೆ" ಅವಳು ಉತ್ತರಿಸಿದಳು. ಅಭಿಸಾರಿಕೆಯಾಗಿ ಯಾಕೆ ಹೋಗಲಿಲ್ಲವೆಂದು ಕೇಳಿದುದಕ್ಕೆ ಅವಳು ಈ ಸ್ಥಿತಿಯಲ್ಲಿ ನನಗೆ ಪ್ರತ್ಯುಪಕಾರಮಾಡಲು ಅವನಿಗೆ ಅಸಾಧ್ಯವಾಗಿರುವುದರಿಂದ ಹೋಗಲಿಲ್ಲವೆಂದು ವಸಂತಸೇನೆಯು ತಿಳಿಸಿದಳು.

ಹೀಗೆ ವಸಂತಸೇನೆ ಮತ್ತು ಚೇಟಿ ಮಾತನಾಡುತ್ತಿದ್ದಾಗ ಅವರಿದ್ದ ಕೊಠಡಿಗೆ ಸಂವಾಹಕನು ಬಂದನು. ಈತ ಹುಟ್ಟಿನಿಂದ ವೈಶ್ಯನಾಗಿದ್ದನು. ಅವನ ಕುಲಕಸುಬು ಅವನ ಕೈಕಚ್ಚಿತು. ಅವನು ದರಿದ್ರನಾಗಿ ಪಾಟಲಿಪುರದಿಂದ ಉಜ್ಜಯಿನಿಗೆ ಬಂದು ಸೇರಿದನು. ಅವನು ಕಲೆಯೆಂದು ಕಲಿತಿದ್ದ ಸಂವಾಹಕವೃತ್ತಿಯೇ ಅವನ ಜೀವನೋಪಾಯಕ್ಕೆ ನೆರವಾಯಿತು. ಅವನು ಗುಣವಂತನಾದ ಚಾರುದತ್ತನ ಮನೆಯಲ್ಲಿ ಜೀತಕ್ಕೆ ಸೇರಿಕೊಂಡನು. ದಣಿಯ ಮೈ ಕೈ ಹಿಸುಕಿ ನೋವನ್ನು ಹೋಗಲಾಡಿಸುವುದು ಅವನ ಕಲೆಯ ರಹಸ್ಯ. ಚಾರುದತ್ತನು

ಗರೀಬನಾದನಂತರ ತನ್ನ ಊಳಿಗದವರನ್ನು ಸಾಕಲಾರದೆ ಬೇರೆಯವರ ಬಳಿ ಊಳಿಗಕ್ಕೆ ಸೇರಲು ಅವರನ್ನು ಕಳುಹಿಸಿದನು.

ಚಾರುದತ್ತನನ್ನು ಸೇವಿಸಿದ ಸಂವಾಹಕನಿಗೆ ಇನ್ನೊಬ್ಬರಲ್ಲಿ ಊಳಿಗ ಮಾಡಲು ಮನಸ್ಸು ಒಡಂಬಡಲಿಲ್ಲ. ಅವನು ಹೊಟ್ಟೆಹೊರೆಯಲು ಜೂಜಾಡತೊಡಗಿದನು, ಸಂಪಾದನೆಯನ್ನೂ ಮಾಡಿದನು. ಯಾವಾಗಲೂ ತನಗೆ ಸೋಲುತ್ತಿದ್ದ ಒಬ್ಬ ಮನುಷ್ಯನಿಗೆ ಅವನು ಒಂದು ಸಲ ತಾನೇ ಹತ್ತು ಹೊನ್ನುಗಳನ್ನು ಸೋತುಬಿಟ್ಟನು. ಆ ಹೊನ್ನನ್ನು ಅವನಿನ್ನೂ ಕೊಟ್ಟಿರಲಿಲ್ಲ. ಒಂದು ದಿನ ಅವನು ವೇಶ್ಯಾವಾಟಿಯಲ್ಲಿ ಬರುತ್ತಿರುವಾಗ ಎದುರಿಗೆ ಆ ಸಾಲಗಾರ ಬರುತ್ತಿದ್ದನು. ಸಂವಾಹಕನು ಅವನಿಂದ ಪಾರಾಗಲು ಗಣಿಕೆಯ ಮನೆಯನ್ನು ಪ್ರವೇಶಿಸಿದನು. ಅವನ ಅದೃಷ್ಟಕ್ಕೆ ಅದು ವಸಂತಸೇನೆಯ ಮನೆಯೇ ಆಗಿತ್ತು. ಸಂವಾಹಕನು ತನ್ನ ಕಥೆಯನ್ನೆಲ್ಲಾ ವಸಂತಸೇನೆಯ ಎದೆಗರಗುವಂತೆ ಹೇಳಿಕೊಂಡನು. ತನ್ನ ಪ್ರಿಯನಲ್ಲಿ ಊಳಿಗಕ್ಕಿದ್ದ ಅವನ ಬಗೆಗೆ ವಸಂತಸೇನೆಗೆ ವಿಶ್ವಾಸವುಂಟಾಗಿ ಅವಳು ಅವನ ಸಾಲವನ್ನು ತೀರಿಸಲು ಸಹಾಯ ಮಾಡಿದಳು.

ಸಂವಾಹಕನು ಹೋದಮೇಲೆ ವಸಂತಸೇನೆಯ ಸೇವಕ ಕರ್ಣಪೂರನು ಬಂದು ಸ್ವಲ್ಪಹೊತ್ತಿನ ಹಿಂದೆ ರಾಜಬೀದಿಯಲ್ಲಿ ನಡೆದ ಸಂಗತಿಯೊಂದನ್ನು ಹೇಳಿದನು. ಅವನು 'ಭದ್ರಕಪೋತ' ಆನೆಯನ್ನು ಸ್ನಾನಮಾಡಿಸಿ ರಾಜಬೀದಿಯಲ್ಲಿ ಕರೆತರುತ್ತಿದ್ದನು. ಅದು ಒಬ್ಬ ಪರಿವ್ರಾಜಕನ ಕೆಂಪು ಬಟ್ಟೆಯನ್ನು ನೋಡಿ ಅವನನ್ನು ಅಟ್ಟಿಸಿಕೊಂಡು ಹೋಗಿ ನೆಲಕ್ಕೆ ಕೆಡವಿತು ಅಕ್ಕಪಕ್ಕದ ಜನರೆಲ್ಲಾ ಕೂಗತೊಡಗಿದರು. ಕರ್ಣಪೂರನು ಧೈರ್ಯದಿಂದ ಓಡಿ ಆನೆಯನ್ನು ಗದರಿಸಿ ಅವನನ್ನು ಕಾಪಾಡಿದನು. ಜನರು ಗುಂಪುಗೂಡಿ ಮಾವಟಿಗನ ಧೈರ್ಯವನ್ನು ಕೊಂಡಾಡಿದರು. ಆ ಗುಂಪಿನಲ್ಲಿ ಚಾರುದತ್ತನೂ ಇದ್ದನು. ಅವನು ಮಾವಟಿಗನ ಧೈರ್ಯಕ್ಕೆ ಮೆಚ್ಚಿ ಅವನಿಗೆ ಬಹುಮಾನವೀಯಲು ತನ್ನಲ್ಲಿ ಯಾವ ತೊಡಿಗೆಯೂ ಇಲ್ಲದುದರಿಂದ ತಾನು ಹೊದೆದಿದ್ದ ಉತ್ತರೀಯವನ್ನೇ ಕೊಟ್ಟನು. ಕರ್ಣಪೂರನಿಗೆ ಬಹುಮಾನವಿತ್ತವನು ಯಾರೆಂದು ತಿಳಿಯದು. ಅವನು ಓಡೋಡುತ್ತಾ ಬಂದು ತನ್ನ ಒಡತಿ ವಸಂತಸೇನೆಗೆ ಈ ಸಂಗತಿಯನ್ನು ವಿವರಿಸಿದನು.

ತಾನು ಹೊದೆದಿದ್ದ ಬಟ್ಟೆಯನ್ನೇ ದಾನಕೊಡಬೇಕಾದರೆ ಆತ ತಾನು ಮೆಚ್ಚಿರುವ ದಾನಶೀಲ ಚಾರುದತ್ತನಲ್ಲದೆ ಬೇರಾರೂ ಆಗಿರಲಾರರೆಂದು ವಸಂತಸೇನೆಯು

ಊಹಿಸಿದಳು. ಅವಳ ಊಹೆ ನಿಜವಾಯಿತು. ಅವಳು ಒಡನೆಯೇ ಮಹಡಿಯ ಮೇಲೆ ಹೋಗಿ ನೋಡಿದಾಗ ರಾಜಮಾರ್ಗದ ತಿರುವಿನಲ್ಲಿ ಮೇಲುಹೊದಿಕೆಯಿಲ್ಲದೆ ಹೋಗುತ್ತಿದ್ದ ಚಾರುದತ್ತನು ಕಾಣಿಸಿದನು. ತನ್ನ ಪ್ರಿಯನ ದಾನಬುದ್ಧಿಯನ್ನು ಕೇಳಿ ಅವಳ ಪ್ರೇಮ ಗಾಢವಾಯಿತು.

ಎರಡು ದಿನಗಳುರುಳಿದುವು. ವಸಂತಸೇನೆ, ಚಾರುದತ್ತರು ಪರಸ್ಪರ ಸಂಧಿಸದಿದ್ದರೂ ಅವರ ಪ್ರೇಮ ಅಬಾಧಿತವಾಗಿತ್ತು. ವಿರಹವು ಇಬ್ಬರನ್ನೂ ಕಾಡುತ್ತಿತ್ತು. ತನ್ನ ಪ್ರಿಯನ ಗುಣಗಳನ್ನು ತನ್ನ ಚೇಟಿಯೊಡನೆ ಎಷ್ಟು ಹೊಗಳಿದರೂ ಅವಳ ಬಾಯಿ ಸೋಲದು. ಅವಳಿಗೆ ಸದಾ ಅವನ ಚಿಂತೆಯೆ!

ಚಾರುದತ್ತನಿಗೆ ಹೊತ್ತು ಕಳೆಯುವುದು ಕಷ್ಟವಾಯಿತು. ಒಂದು ರಾತ್ರಿ ಅವನು ವಿದೂಷಕನೊಡನೆ ಸಂಗೀತ ಕೇಳಲು ಹೋಗಿದ್ದನು. ಅವನಿಗೆ ವೀಣಾವಾದನ ರುಚಿಸಲಿಲ್ಲ. ನಗರದ ಸದ್ದು ಅಡಗಿತ್ತು. ಅಷ್ಟಮಿಯ ಚಂದ್ರ ಮುಳುಗಲಿದಾಗ ಅವರಿಬ್ಬರೂ ಮನೆಗೆ ಬಂದರು. ಅವರಿಬ್ಬರೂ ಸ್ವಲ್ಪ ಹೊತ್ತು ಮಾತನಾಡುತ್ತಾ ನಿದ್ರಿಸಿದರು. ವಸಂತಸೇನೆಯ ಒಡವೆಯ ಪೆಟ್ಟಿಗೆಯು ಎಲ್ಲಿ ಕಳುವಾಗಿಬಿಡುವುದೋ ಎಂಬ ಶಂಕೆಯಿಂದ ವಿದೂಷಕನು ಅದನ್ನು ತಲೆದೆಸೆಯಲ್ಲೇ ಇಟ್ಟುಕೊಂಡು ಮಲಗಿದನು.

* * *

ವಸಂತಸೇನೆಯ ಚೇಟಿ ಮದನಿಕೆಯು ಸಜ್ಜಲಕನನ್ನು ಪ್ರೀತಿಸುತ್ತಿದ್ದಳು. ಅವರಿಬ್ಬರೂ ಮದುವೆಯಾಗಬೇಕಾದರೆ ಮದನಿಕೆಯು ಬಿಡುಗಡೆಯ ಹಣವನ್ನು ಒಡತಿಗೆ ಕೊಟ್ಟು ತನ್ನ ದಾಸ್ಯದಿಂದ ಮುಕ್ತಳಾಗಬೇಕಾಗಿತ್ತು. ಅಷ್ಟು ಹಣವನ್ನು ಕೊಟ್ಟು ಬಿಡಿಸಿಕೊಳ್ಳಲು ಸಜ್ಜಲಕನಿಗೆ ಸಾಮರ್ಥ್ಯವಿರಲಿಲ್ಲ. ಆದರೆ ಅವನು ಚೋರವೃತ್ತಿಯಲ್ಲಿ ನಿಪುಣನಾಗಿದ್ದನು. ಎಲ್ಲಾದರೂ ಕನ್ನಹಾಕಿ ಹಣವನ್ನು ತಂದು ದಾಸ್ಯದಿಂದ ಮದನಿಕೆಯನ್ನು ಬಿಡಿಸಲು ಅವನು ತೀರ್ಮಾನಿಸಿದ್ದನು.

ಸಜ್ಜಲಕನು ನಗರದ ಸದ್ದಡಗುವುದನ್ನೇ ಕಾಯುತ್ತಿದ್ದನು. ಅವನು ಅಷ್ಟಮಿಯ ಚಂದ್ರ ಮುಳುಗಿದ ಮೇಲೆ ಚಾರುದತ್ತನ ಮನೆಗೆ ಕನ್ನಕೊರೆದನು. ಆದೇ ತಾನೇ ಸಂಗೀತ ಮುಗಿಸಿಕೊಂಡು ಬಂದಿದ್ದ ಚಾರುದತ್ತ, ವಿದೂಷಕರಿಗೆ ನಿದ್ರೆ ಚೆನ್ನಾಗಿ ಬಂದಿತ್ತು. ಆದರೂ ವಿದೂಷಕನಿಗೆ ನಿದ್ರೆಯಲ್ಲೂ ಒಡವೆಯ ಪೆಟ್ಟಿಗೆಯದೇ ಯೋಚನೆಯಾಗಿತ್ತು.

ಅವರು ಮಲಗಿದ್ದ ಕೊಠಡಿಗೆ ಸಜ್ಜಲಕನು ಕನ್ನದ ಮೂಲಕ ಬಂದನು. ಅವನಿಗೆ ಅಲ್ಲಿ ತೆಗೆದುಕೊಳ್ಳಬಹುದಾದ ಯಾವ ಪದಾರ್ಥವೂ ಕಾಣಿಸಲಿಲ್ಲ. ತಾನು ಬಂದುದು ವ್ಯರ್ಥವಾಯಿತು. ಮನೆಯ ಯಜಮಾನ ದರಿದ್ರನಿರಬಹುದು ಅಥವಾ ಹಿಂದೆ ಭೋಗಿಸಿ ಈಗ ದರಿದ್ರನಾಗಿರಬಹುದು ಎಂದು ಆಲೋಚಿಸುತ್ತ ನಿಂತುಕೊಂಡನು. ಅನಂತರ ಅವನು ತನ್ನಂತೆಯೇ ದರಿದ್ರಾವಸ್ಥೆಯಲ್ಲಿರುವ ಕುಲೀನನನ್ನು ಪೀಡಿಸಬಾರದೆಂದುಕೊಂಡು ಹೊರಡಲನುವಾದನು.

ಆದರೆ ಅಷ್ಟರಲ್ಲೇ "ಅಯ್ಯಾ ಈ ಬಂಗಾರದ ಪೆಟ್ಟಿಗೆಯನ್ನು ತೆಗೆದುಕೋ" ಎಂದು ವಿದೂಷಕನು ಕನವರಿಸಿದನು. ಸಜ್ಜಲಕನು ಮೊದಲು ಬೆಚ್ಚಿಬಿದ್ದನು. ಆಮೇಲೆ ಧೈರ್ಯವಾಗಿ ಅಲ್ಲೇ ನಿಂತು ಪರೀಕ್ಷಿಸಿದಾಗ ಕನವರಿಕೆಯೆಂದು ಅವನಿಗೆ ಗೊತ್ತಾಯಿತು. ಅವನು ವಿದೂಷಕನನ್ನು ಸಮೀಪಿಸಿ ನೋಡಿದಾಗ ಅವನು ಗಾಢನಿದ್ರೆಯಲ್ಲಿ ಮುಳುಗಿದ್ದನು. ಸಜ್ಜಲಕನು ಸುತ್ತಲೂ ದಿಟ್ಟಿಸಿದಾಗ ದೀಪದ ಮಂದಪ್ರಕಾಶದಲ್ಲಿ ಹೊದಿಕೆಯಲ್ಲಿ ಹೊಳೆಯುವ ಪೆಟ್ಟಿಗೆಯು ಕಾಣಿಸಿತು. ಅದನ್ನು ವಿದೂಷಕನು ಬಿಗಿಯಾಗಿ ಹಿಡಿದಿದ್ದನು. ದೀಪವಿದ್ದರೆ ಕೆಲಸ ಕೆಡುವುದೆಂದು ತಾನು ಮೊದಲೇ ಯೋಚಿಸಿ ತಂದಿದ್ದ ಡಬ್ಬಿಯಲ್ಲಿದ್ದ ದುಂಬಿಯನ್ನು ಹೊರಕ್ಕೆ ಅವನು ಬಿಟ್ಟನು. ಅದು ಹಾರಿಹೋಗಿ ದೀಪದ ಸುತ್ತಲೂ ನಾಲ್ಕಾರು ಸಲ ಸುತ್ತಿ ದೀಪವನ್ನು ಆರಿಸಿ ಕೆಳಗೆ ಬಿತ್ತು.

"ಅಯ್ಯೋ, ದೀಪ ಆರಿಹೋಯಿತು. ಇನ್ನು ಪೆಟ್ಟಿಗೆ ಕಳುವಾದ ಹಾಗೆಯೆ. ದಾರಿತಪ್ಪಿದ ವರ್ತಕನಂತೆ ನನಗೆ ನಿದ್ದೆ ಬಾರದು. ಆದ್ದರಿಂದ ಅಯ್ಯಾ ಚಾರುದತ್ತ ನನ್ನಾಣೆಗೂ ಪೆಟ್ಟಿಗೆಯನ್ನು ತೆಗೆದುಕೊ" ವಿದೂಷಕನು ಕನವರಿಸಿದನು.

ಆಗ ಸಜ್ಜಲಕನು "ಇಗೋ ತೆಗೆದುಕೊಳ್ಳುತ್ತೇನೆ" ಎನ್ನುತ್ತಾ ಪೆಟ್ಟಿಗೆಯನ್ನು ವಿದೂಷಕನ ಕೈಯಿಂದ ಈಸಿಕೊಂಡನು.

"ಇನ್ನು ಸರಕನ್ನು ಮಾರಿದ ವರ್ತಕನಂತೆ ನಾನು ನಿಶ್ಚಿಂತೆಯಿಂದ ಮಲಗುತ್ತೇನೆ" ವಿದೂಷಕನು ನುಡಿದನು.

ಬ್ರಾಹ್ಮಣನು ನಂಬಿ ನನ್ನ ಕೈಗೆ ಕೊಟ್ಟ ವಸ್ತುವನ್ನು ಹೇಗೆ ಕದಿಯುವುದೆಂದು ಸಜ್ಜಲಕನ ಮನಸ್ಸು ಇಬ್ಬಗೆಯಾಯಿತು. ಅಷ್ಟರಲ್ಲಿ ಬೆಳಗಿನ ಜಾವದಲ್ಲಾಗುವ ನಗಾರಿಯ ಸದ್ದಾದುದರಿಂದ ಅವನು ಪೆಟ್ಟಿಗೆಯನ್ನು ತೆಗೆದುಕೊಂಡು ಅಲ್ಲಿಂದ ಹೊರಟುಹೋದನು.

ನಗಾರಿಯ ಶಬ್ದದಿಂದ ಚೇಟಿಗೆ ಎಚ್ಚರವಾಯಿತು. ಅವಳು ಎದ್ದು ಹೊರಗೆ ಹೋದಳು. ಅವಳು ಅಲ್ಲಿ ಪಕ್ಕನೆ ಗೋಡೆಯ ಕನ್ನವನ್ನು ಕಂಡು ಭಯದಿಂದ ಕೂಗಿ ವಿದೂಷಕನನ್ನು ಎಚ್ಚರಗೊಳಿಸಿದಳು. ಅವನು ತಬ್ಬಿಬ್ಬಾಗಿ ಥಟ್ಟನೆ ಮೇಲಕ್ಕೆದ್ದನು.

ವಿದೂಷಕನು ಗೋಡೆಯ ಕನ್ನವನ್ನು ನೋಡಿ ಚಾರುದತ್ತನನ್ನು ಎಬ್ಬಿಸಿ ಹೇಳಿದನು. "ನೋಡು, ನೀನು ಸದಾ ನನ್ನನ್ನು ದಡ್ಡ ಎನ್ನುತ್ತೀಯೆ. ನಾನು ಒಡವೆಯ ಪೆಟ್ಟಿಗೆಯನ್ನು ರಾತ್ರಿಯೇ ನಿನ್ನ ಕೈಲಿ ಬುದ್ಧಿವಂತಿಕೆಯಿಂದ ಕೊಟ್ಟಿದು ಒಳ್ಳೆಯದಾಯ್ತು." ಅವನು ಕನವರಿಸುತ್ತಾ ಕಳ್ಳನ ಕೈಗೆ ಪೆಟ್ಟಿಗೆ ಕೊಟ್ಟಿದುದನ್ನು ಚಾರುದತ್ತನ ಕೈಗೇ ಕೊಟ್ಟೆನೆಂದು ಭ್ರಮೆಗೊಂಡಿದ್ದನು.

ಆದರೆ ಚಾರುದತ್ತನಿಗೆ ಸಂದೇಹ. "ನೀನು ಪೆಟ್ಟಿಗೆಯನ್ನು ನನಗೆ ಯಾವಾಗ ಕೊಟ್ಟೆ ?"

"ನಿಜವಾಗಿಯೂ ಮಧ್ಯರಾತ್ರಿಯಲ್ಲಿ ನಿನಗೆ ಕೊಟ್ಟೆ."

"ಅಯ್ಯೋ ಹಾಗಾದ್ರೆ ಅದು ಕಳುವಾಗಿದೆ." ಚಾರುದತ್ತನು ವಿದೂಷಕನ ಮಾತನ್ನು ಸುಮ್ಮನೆ ಒಪ್ಪಬೇಕಾಯಿತು. 'ದರಿದ್ರನಾದ ಚಾರುದತ್ತನು ಲೋಭದಿಂದ ಸುಳ್ಳು ಹೇಳುವನೆಂದು ಜನರು ಭಾವಿಸುತ್ತಾರೆಂದು' ಅವನು ತನ್ನಲ್ಲೇ ಅಂದುಕೊಂಡು ತನಗೆ ಬಂದ ಕಷ್ಟವನ್ನು ಚಿಂತಿಸುತ್ತ ಮೌನವಾಗಿದ್ದನು.

ಚಾರುದತ್ತನ ಮನೆಯ ಮಂದಿಗೆಲ್ಲ ಕಳ್ಳತನದ ಸುದ್ದಿ ತಿಳಿಯಿತು. ರದನಿಕೆಯೇ ಯಜಮಾನಿಗೆ ಹೇಳಿದಳು. ತನ್ನ ಗಂಡನಿಗೂ ವಿದೂಷಕನಿಗೂ ಯಾವ ಅಪಾಯವೂ ಸಂಭವಿಸದೆ ಕಳುವು ಮಾತ್ರ ಆಗಿರುವುದು ಯಜಮಾನಿಗೆ ಸಂತೋಷವನ್ನುಂಟುಮಾಡಿತು. ಆದರೆ ಕಳುವಾದ ಒಡವೆಗೇನು ಮಾಡಬೇಕೆಂಬ ಚಿಂತೆಯುಂಟಾಯಿತು. ಒಡವೆಯ ಬೆಲೆ ಸ್ವಲ್ಪವಾದುದಲ್ಲ. ಆದುದರಿಂದ ಆಕೆ ತನ್ನ ಮೇಲಿನ ಒಡವೆಗಳನ್ನೇ ಪ್ರತಿಯಾಗಿ ಕೊಡಲು ನಿರ್ಧರಿಸಿ ತನ್ನ ವಜ್ರದೋಲೆಯನ್ನು ಬಿಚ್ಚಲು ಕಿವಿಗೆ ಕೈ ಹಾಕಿದಳು. ಆದರೆ ವಜ್ರದೋಲೆಗೆ ಬದಲು ಬಿಚ್ಚೋಲೆಯಿತ್ತು. ಅನಂತರ ತನ್ನ ತೌರುಮನೆಯಿಂದ ತಂದ ಬೆಲೆಬಾಳುವ ಮುತ್ತಿನ ಸರವನ್ನು ಕೊಡೋಣವೆಂಬ ಯೋಚನೆ ಬಂತು. ಆ ಯೋಚನೆಯ ಹಿಂದೆಯೇ ಸ್ವಾಭಿಮಾನಿಯಾದ ಆರ್ಯಪುತ್ರ ತೆಗೆದುಕೊಳ್ಳುವನೋ ಇಲ್ಲವೋ ಎಂಬ ಅನುಮಾನವುಂಟಾಯಿತು. ಆದರೂ ಕೊಟ್ಟು ನೋಡೋಣವೆಂದು ಅದನ್ನು ತರಲು ಅವಳು ಹೋದಳು.

ವಿದೂಷಕನು ತಾನು ದಿಟವಾಗಿಯೂ ಒಡವೆಯ ಪೆಟ್ಟಿಗೆಯನ್ನು ಚಾರುದತ್ತನ ಕೈಯಲ್ಲಿ ಕೊಟ್ಟಿರುವೆನೆಂದು ಭ್ರಮಿಸಿ ಅದನ್ನು ಹಿಂದಕ್ಕೆ ಕೊಡಲು ಅವನನ್ನು ಒತ್ತಾಯಿಸತೊಡಗಿದನು. ಚಾರುದತ್ತನಿಗೆ ಉಭಯ ಸಂಕಟ, ಅವನು ಕೊಡ ಲಿಲ್ಲವೆಂದು ಹೇಳಲಾರ. "ನನ್ನ ನಡೆ ನುಡಿಯನ್ನು ಬಲ್ಲ ನೀನೇ ನಂಬದಿರುವಾಗ ಇನ್ನು ನಾಟ್ಯದಿಂದ ಜೀವಿಸುವ ಅವಳು ಹೇಗೆತಾನೆ ನನ್ನ ಮಾತನ್ನು ನಂಬು ವಳು" ಎಂದು ನುಡಿದು ನಿಟ್ಟುಸಿರಿಟ್ಟನು. ಈಗ ವಿದೂಷಕನಿಗೆ ಸಂದೇಹವುಂಟಾ ಯಿತು. ತಾನೇ ಕಳ್ಳನ ಕೈಗೆ ಕೊಟ್ಟಿರಬಹುದೆಂದು ಅವನು ಯೋಚಿಸಿ ಪೆಚ್ಚಾ ದನು.

ಚಾರುದತ್ತನ ಮಡದಿ ತನ್ನ ಮುತ್ತಿನ ಹಾರವನ್ನು ತಂದು ಮೈತ್ರೇಯನನ್ನು ಕರೆದು ಈ ದಾನವನ್ನು ಸ್ವೀಕರಿಸೆಂದು ಕೊಡಹೋದಳು. ಅವನು ಈ ದಾನವೇ ಕೆಂದು ಅನುಮಾನಿಸುತ್ತ ಸುಮ್ಮನಿದ್ದನು.

ಚಾರುದತ್ತನ ಮಡದಿ ಹೇಳಿದಳು. "ನಾನು ಷಷ್ಠಿಯ ದಿನ ಉಪವಾಸ ಮಾಡಿ ಪೂಜೆಮಾಡುತ್ತೇನಷ್ಟೆ. ಅಂದು ಉತ್ತಮ ವಸ್ತುವನ್ನು ಬ್ರಾಹ್ಮಣನಿಗೆ ದಾನ ವಿತ್ತು ಆಶೀರ್ವಾದ ಪಡೆಯಬೇಕು."

"ಈವೊತ್ತು ಅಷ್ಟಮಿ" ವಿದೂಷಕನು ಹೇಳಿದನು.

"ನನಗೆ ಮರೆತು ಹೋಗಿತ್ತು. ಇಂದೆ ಪೂಜೆಮಾಡುತ್ತೇನೆ." ಬ್ರಾಹ್ಮಣಿ ಹೇಳಿದಳು. ವಿದೂಷಕನಿಗೆ ಒಡತಿಯ ಇಂಗಿತ ಹೊಳೆಯಿತು. ಅವನು ರದನಿಕೆ ಯನ್ನು ಮೆಲ್ಲಗೆ ಕೇಳಿದನು. ಅವಳು ಸತ್ಯಸಂಗತಿಯನ್ನು ತಿಳಿಸಿ ತೆಗೆದು ಕೊಳ್ಳಲು ಅವನಿಗೆ ಪ್ರೇರೇಪಿಸಿದಳು.

ವಿದೂಷಕನು ಹಾರವನ್ನು ತೆಗೆದುಕೊಂಡನು. ಅನಂತರ ಅವನು ಚಾರುದತ್ತನಿಗೆ ಈ ಸಂಗತಿಯನ್ನು ತಿಳಿಸಿದನು. "ಸ್ತ್ರೀಧನದಿಂದ ನಾನು ಋಣಮುಕ್ತನಾಗ ಬೇಕಾಯಿತೆ ?" ಚಾರುದತ್ತನು ಮರುಗಿದನು. ಅದನ್ನು ತೆಗೆದುಕೊಳ್ಳ ಬೇಕೆಂದು ವಿದೂಷಕನು ಒತ್ತಾಯಪಡಿಸಿದಾಗ ಚಾರುದತ್ತನು ಅದನ್ನು ವಸಂತ ಸೇನೆಗೆ ಕೊಟ್ಟು ಬರಲು ಅವನನ್ನೇ ಅವಳ ಬಳಿಗೆ ಕಳುಹಿಸಿದನು.

ಚಿನ್ನದ ಪೆಟ್ಟಿಗೆಗೆ ಇಂಥ ಬೆಲೆಬಾಳುವ ಸರವನ್ನು ಕೊಡುವುದು ಸರಿಯಲ್ಲವೆಂದು ವಿದೂಷಕನು ಆಕ್ಷೇಪಿಸಿದನು. ಆದರೆ ಚಾರುದತ್ತನು "ಅವಳು ಯಾವ ನಂಬಿಕೆ

ಯಿಂದ ನನ್ನಲ್ಲಿ ಕೊಟ್ಟಳೋ ಆ ನಂಬಿಕೆಗೆ ಬೆಲೆಯಾಗಿ ಇದನ್ನು ಕೊಡಬೇಕು" ಎಂದನು. ವಿದೂಷಕನು ಮರುಮಾತಿಲ್ಲದೆ ಸರವನ್ನು ತೆಗೆದುಕೊಂಡು ವಸಂತ ಸೇನೆಯ ಮನೆಗೆ ಹೋದನು.

ವಸಂತಸೇನೆಗೆ ಚಾರುದತ್ತನ ಮೇಲಿನ ಪ್ರೇಮ ಹೆಚ್ಚಿದಂತೆ ವ್ಯಥೆಯೂ ಹೆಚ್ಚಾಗ ತೊಡಗಿತು. ಅವಳಿಗೆ ಕಾಲಕಳೆಯುವುದು ಕಷ್ಟವಾಯಿತು. ತನ್ನ ಹೃದಯ ದಲ್ಲಿ ನೆಲಸಿದ ಪ್ರಿಯನ ಚಿತ್ರವನ್ನು ಚಿತ್ರದ ಹಲಗೆಯ ಮೇಲೆ ಅವಳು ಮೂಡಿ ಸಿದ್ದಳು. ಅವಳು ರಚಿಸಿದ ಚಿತ್ರವನ್ನು ಚೇಟಿಯು ನೋಡಿ ಹೊಗಳುತ್ತಿದ್ದಳು.

ಆ ತನ್ನ ಪ್ರಯತ್ನದಲ್ಲಿ ಹತಾಶನಾದ ಶಕಾರನು ಆಭರಣದ ಆಸೆಯನ್ನು ತೋರಿ ವಸಂತಸೇನೆಯನ್ನು ಒಲಿಸಿಕೊಳ್ಳಬೇಕೆಂದು ನಿರ್ಧರಿಸಿ ಅನೇಕ ಆಭರಣಗಳೊಡನೆ ತನ್ನ ಆಶೆಯನ್ನೂ ತಿಳಿಸಿ ವಸಂತಸೇನೆಯ ತಾಯಿಗೆ ಕಳುಹಿಸಿಕೊಟ್ಟದ್ದನು. ಹೊಳೆ ಹೊಳೆಯುವ ಒಡವೆಗಳನ್ನು ನೋಡಿ ಆ ತಾಯಿಗೆ ಆನಂದವಾಯಿತು. ಅವಳಿಗೆ ಮಗಳ ಅಭಿಪ್ರಾಯ ತಿಳಿದಿರಲಿಲ್ಲ. ಅವಳು ಆ ಒಡವೆಗಳನ್ನು ಹಾಕಿ ಕೊಂಡು ಬಂಡಿಯಲ್ಲಿ ಕುಳಿತು ಶಕಾರನ ಮನೆಗೆ ಹೋಗಬೇಕೆಂದು ಚೇಟಿಯ ಕೈಯಲ್ಲಿ ಕೊಟ್ಟು ಮಗಳ ಬಳಿಗೆ ಕಳುಹಿಸಿದ್ದಳು. ಆ ಒಡವೆಗಳನ್ನು ಹಿಡಿದು ಕೊಂಡು ಆ ಚೇಟಿಯು ಒಡತಿಯನ್ನು ಸಮೀಪಿಸಿದಳು.

ತನ್ನ ತಾಯಿಯ ಸಂದೇಶವನ್ನು ಚೇಟಿಯ ಬಾಯಿಯಿಂದ ಕೇಳಿದಾಗ ವಸಂತ ಸೇನೆಗೆ ಅಸಾಧ್ಯ ಸಿಟ್ಟು ಬಂತು. "ಚಾರುದತ್ತನ ಬಳಿಗೆ ಅಭಿಸಾರಿಕೆಯಾಗಿ ಹೋದಾಗ, ಅಲಂಕಾರ ಮಾಡಿಕೊಳ್ಳುತ್ತೇನೆ" ಎಂದು ವಸಂತಸೇನೆಯು ತಾಯಿಗೆ ಹೇಳಿ ಕಳಿಸಿ ಆ ಒಡವೆಗಳನ್ನು ಹಿಂದಿರುಗಿಸಿಬಿಟ್ಟಳು.

ಸಜ್ಜಲಕನು ಇಷ್ಟರಲ್ಲಿ ವಸಂತಸೇನೆಯ ಮನೆಯ ಬಳಿಗೆ ಬಂದಿದ್ದನು. ಕಳೆದಿ ರುಳು ತಾನು ಮಾಡಿದ ನೀಚ ಕೆಲಸಕ್ಕೆ ಅವನ ಮನಸ್ಸು ಅಳುಕುತ್ತಿತ್ತು. ಇನ್ನು ಮುಂದೆ ಮದನಿಕೆ ತನ್ನವಳಾಗುವಳೆಂದು ಅವನ ಮನಸ್ಸು ಹಿಗ್ಗಿನಿಂದಿತ್ತು. ಅವನು ಮದನಿಕೆಯನ್ನು ಕೂಗಿದನು. ಅವಳು ಅವನ ಧ್ವನಿಯನ್ನು ಗುರುತಿಸಿ ಅವನನ್ನು ನೋಡಲು ಹೊರಗೆ ಹೋದಳು.

ಕೊಠಡಿಯ ಒಳಗಡೆ ವಸಂತಸೇನೆಯಿದ್ದಳು. ಮನೆಯ ಹೊರಗಡೆ ಸಜ್ಜಲಕ, ಮದನಿಕೆಯರು ಮೆಲ್ಲಗೆ ಗುಟ್ಟಾಗಿ ಮಾತನಾಡುತ್ತಾ ನಿಂತಿದ್ದರು. ಹೊರಗೆ

ಹೋದ ಮದನಿಕೆ ಏಕೆ ಬರಲಿಲ್ಲವೆಂದು ಅನುಮಾನಿಸಿ ವಸಂತಸೇನೆಯೂ ಹೊರಕ್ಕೆ ಬಂದು ಸದ್ದು ಮಾಡದೆ ಅವರ ಮಾತನ್ನು ಕೇಳುತ್ತಾ ನಿಂತುಕೊಂಡಳು.

ತಾನು ತಂದಿದ್ದ ಆಭರಣಗಳ ಪೆಟ್ಟಿಗೆಯನ್ನು ಮದನಿಕೆಗಿತ್ತು ಅದನ್ನು ವಸಂತಸೇನೆಗೆ ಕೊಡಲು ಸಜ್ಜಲಕನು ಹೇಳಿದನು. ಮದನಿಕೆ ಒಡವೆಗಳನ್ನು ನೋಡಿ ಇವು ಪರಿಚಿತವಾದ ಒಡವೆಗಳು. ಇವು ಇವನಿಗೆ ಹೇಗೆ ಸಿಕ್ಕಿದುವು ಎಂದು ಅನುಮಾನಪಟ್ಟಳು. "ಈ ಒಡವೆಗಳನ್ನು ಎಲ್ಲಿ ತಂದೆ?" ಎಂದು ಮದನಿಕೆಯು ಅವನನ್ನು ಕೇಳಿದಾಗ ಅವನು ಕಳೆದ ರಾತ್ರಿ ತಾನು ಮಾಡಿದ ಸಾಹಸವನ್ನು ವಿವರಿಸಿದನು.

ಮದನಿಕೆ ಸಜ್ಜಲಕರ ಮಾತುಗಳನ್ನು ವಸಂತಸೇನೆಯು ಕೇಳಿಸಿಕೊಳ್ಳುತ್ತಿದ್ದಳು. ಅಕಾರ್ಯವನ್ನು ಮಾಡಿದಂತಾಯಿತೆಂದು ಸಜ್ಜಲಕನಿಗೆ ಪಶ್ಚಾತ್ತಾಪವಾಗುತ್ತಿತ್ತು. ಸದ್ಯ ಯಾರಿಗೂ ಆಯುಧದಿಂದ ಗಾಯವಾಗಲಿಲ್ಲವೆಂದು ಮದನಿಕೆಗೆ ಸಂತೋಷವಾಗಿತ್ತು.

"ಮುಂದೇನು ಮಾಡುವುದು?" ಸಜ್ಜಲಕನು ಮದನಿಕೆಯನ್ನು ಪ್ರಶ್ನಿಸಿದನು.

"ಇದನ್ನು ನಮ್ಮ ಒಡತಿ ತೆಗೆದುಕೊಳ್ಳುವುದಿಲ್ಲ. ಮಾಲೀಕರಿಗೇ ಕೊಟ್ಟುಬಿಡು" ಮದನಿಕೆಯು ಸಲಹೆಯಿತ್ತಳು.

"ಅವನೇನಾದರೂ ಕಳ್ಳನೆಂದು ಕಾವಲಿನವರಿಗೆ ಹಿಡಿದುಕೊಟ್ಟರೆ?"

"ಅವನು ಒಳ್ಳೆ ವಂಶಸ್ಥನಾದುದರಿಂದ ನಿನ್ನ ಗುಣವನ್ನು ಮೆಚ್ಚಿಕೊಳ್ಳುತ್ತಾನೆ" ಮದನಿಕೆಯು ಉತ್ತರಿಸಿದಳು.

ಮದನಿಕೆಯ ಮಾತನ್ನು ಕೇಳಿ ವಸಂತಸೇನೆಗೆ ತೃಪ್ತಿಯಾಯಿತು. ಆದರೆ ಸಜ್ಜಲಕನು ಒಡವೆಗಳೊಡನೆ ಚಾರುದತ್ತನ ಬಳಿಗೆ ಹೋಗಲು ಒಪ್ಪಲಿಲ್ಲ.

ಕೊನೆಗೊಂದು ಉಪಾಯವನ್ನು ಮದನಿಕೆಯು ಮಾಡಿದಳು. "ಆರ್ಯಪುತ್ರನು ಕೊಟ್ಟನೆಂದು ಹೇಳಿ ವಸಂತಸೇನೆಗೆ ಇದನ್ನು ಕೊಡು. ಇದರಿಂದ ಎಲ್ಲರಿಗೂ ಕ್ಷೇಮ. ನನಗೂ ಸಂತೋಷ, ಅಲ್ಲದೆ ಒಡತಿಯನ್ನು ವಂಚಿಸಿದರೆ ನನ್ನ ಬಿಡುಗಡೆಯಾಗುವುದಿಲ್ಲ" ಎಂದಳು.

ಮದನಿಕೆಯ ಸಲಹೆಯಂತೆ ನಡೆದುಕೊಳ್ಳಲು ಸಜ್ಜಲಕನು ಒಪ್ಪಿಕೊಂಡನು.

ಇವರ ಮಾತನ್ನು ಮರೆಯಲ್ಲಿ ಕೇಳುತ್ತಿದ್ದ ವಸಂತಸೇನೆಯು ಕೊಠಡಿಗೆ ಹೋಗಿ ಕುಳಿತುಕೊಂಡಳು. "ನಾನು ಕೂಗುವತನಕ ಇಲ್ಲೇ ಕಾದಿರು" ಎಂದು ಮದನಿಕೆಯು ಅವನಿಗೆ ಹೇಳಿ ಅವಳು ಮನೆಯೊಳಕ್ಕೆ ಹೋದಳು.

ಅದೇ ಸಮಯಕ್ಕೆ ವಿದೂಷಕನೂ ಕೂಡ ಮುತ್ತಿನ ಸರವನ್ನು ತೆಗೆದುಕೊಂಡು ವಸಂತಸೇನೆಯ ಮನೆಗೆ ಹೋದನು. ವಸಂತಸೇನೆಯು ಅವನನ್ನು ಗೌರವದಿಂದ ಬರಮಾಡಿಕೊಂಡಳು.

"ನನ್ನ ಗೆಳೆಯ ಜೂಜಿನಲ್ಲಿ ನಿನ್ನ ಒಡವೆಗಳನ್ನು ಸೋತುಬಿಟ್ಟ. ಅದಕ್ಕೆ ಪ್ರತಿಯಾಗಿ ಈ ಮುತ್ತಿನ ಸರವನ್ನು ಕೊಟ್ಟು ಕಳುಹಿಸಿದ್ದಾನೆ" ವಿದೂಷಕನು ಹೇಳಿ ಮುತ್ತಿನ ಸರವನ್ನು ಅವಳಿಗೆ ಕೊಡಲು ಹೋದನು. ಅವಳು ಸ್ವಲ್ಪ ಯೋಚಿಸಿ ತೆಗೆದುಕೊಳ್ಳದಿದ್ದರೆ ತಪ್ಪಾಗುವುದೆಂದುಕೊಂಡು ಆ ಸರವನ್ನು ಈಸಿಕೊಂಡು ಅನಂತರ ಅವನನ್ನು ಬೀಳ್ಕೊಟ್ಟಳು. ದುರ್ದೆಸೆಯಲ್ಲಿದ್ದರೂ ತನ್ನ ಮಾನವನ್ನು ಕಾಪಾಡಿಕೊಂಡ ಚಾರುದತ್ತನ ಮೇಲೆ ಅವಳ ಗೌರವವು ಇಮ್ಮಡಿಸಿತು.

ಅನಂತರ ಮದನಿಕೆಯು ತನ್ನ ಒಡತಿಗೆ ಸಜ್ಜಲಕನು ಬಂದಿರುವ ಸಂಗತಿಯನ್ನು ತಿಳಿಸಿ ಅವಳ ಅಪ್ಪಣೆಯಂತೆ ಅವನನ್ನು ಒಳಗೆ ಕರೆದೊಯ್ದು ಒಡತಿಗೆ ಭೇಟಿ ಮಾಡಿಸಿದಳು.

"ಮನೆ ಭದ್ರವಾಗಿಲ್ಲದಿರುವುದರಿಂದ ಮತ್ತು ಸಾಕಷ್ಟು ಕಾವಲುಗಾರರು ಇಲ್ಲದಿರುವುದರಿಂದ ಒಡವೆಗಳನ್ನು ರಕ್ಷಿಸುವುದು ಕಷ್ಟವಾಗಿದೆ. ಆದ್ದರಿಂದ ಹಿಂದಕ್ಕೆ ತೆಗೆದುಕೊಳ್ಳಬೇಕು" ಎಂದು ತಿಳಿಸಿ ಒಡವೆಗಳನ್ನು ಚಾರುದತ್ತನು ಕಳುಹಿಸಿರುವನು ಎಂದು ಸಜ್ಜಲಕನು ಹೇಳಿ ಒಡವೆಯ ಪೆಟ್ಟಿಗೆಯನ್ನು ವಸಂತಸೇನೆಗೆ ಕೊಟ್ಟನು.

ಅವಳು ಪ್ರತಿಯಾಗಿ "ಇದನ್ನು ವರ್ತಕಪುತ್ರರಿಗೆ ಕೊಟ್ಟುಬಿಡಿ" ಎಂದು ಮುತ್ತಿನ ಸರವನ್ನು ಕೊಡಲು ಹೋದಳು.

"ನಾನು ಮತ್ತೆ ಅವರ ಮನೆಗೆ ಹೋಗುವುದಿಲ್ಲ" ಸಜ್ಜಲಕನು ಹೇಳಿದನು.

"ಅವರ ಮನೆಯಿಂದ ರಾತ್ರಿ ಸಾಹಸಪಟ್ಟು ಒಡವೆಯನ್ನು ತಂದಿದ್ದೀರಲ್ಲವೆ ?"

ಹೇಗೆ ಅವಳಿಗೆ ತಿಳಿಯಿತೆಂದು ಯೋಚಿಸುತ್ತಾ ನಾಚಿ ಅವನು ತಲೆಯನ್ನು ತಗ್ಗಿಸಿದನು.

ಅನಂತರ ವಸಂತಸೇನೆಯು ಗಾಡಿಯನ್ನು ಸಿದ್ಧಪಡಿಸಲು ಚೇಟಿಗೆ ಹೇಳಿ ಮದನಿಕೆಯ ಕೈಯನ್ನು ಹಿಡಿದು "ಇವಳನ್ನು ಸ್ವೀಕರಿಸಬೇಕು. ಇನ್ನು ನೀವು ಸ್ವತಂತ

